## ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಕುಮಾರಸ್ವಾಮಿ.ಹೆಚ್.ಕೆ. ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1238ಕ್ಕೆ ಅನುಬಂಧ-3

ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವತಿಯಿಂದ ಕಳೆದ 03 ವರ್ಷಗಳಿಂದ **Overhead** ವಿತರಣಾ ಮಾರ್ಗಗಳನ್ನು ಭೂಗತ ಮಾರ್ಗಗಳಾಗಿ ಪರಿವರ್ತಿಸಲು ಗುತ್ತಿಗೆ ನೀಡಿರುವ ಗುತ್ತಿಗೆದಾರರ ವಿವರಗಳು:

| ಆರ್ಥಿಕ ವರ್ಷ | ಕಾರ್ಯಾದೇಶ ಸಂಖ್ಯೆ | ಯೋಜನೆಯ ವಿವರ | ಉಪವಿಭಾಗಗಳು | ಕಾರ್ಯಾದೇಶ ಮೊತ್ತ (ರೂ. ಕೋಟಿಗಳಲ್ಲಿ) | ಗುತ್ತಿಗೆ ವಹಿಸಿದ ಮಾರ್ಗಗಳ ಉದ್ದ: Length of 11 KV UG Cable Proposed in KM's | Length of 1.1KV LT UG Cable Proposed in KM's | Length of 1.1 KV AB Cable Proposed in KM's | ಗುತ್ತಿಗೆದಾರರ ವಿವರ |
|---|---|---|---|---|---|---|---|---|
| 2019-20 | **RC-01 Dt:15.07.2019** | ಬೆ.ವಿ.ಕಂ. ವ್ಯಾಪ್ತಿಯಲ್ಲಿ ಬೆಂ.ಮ.ಕ್ಷೇತ್ರ ವಲಯ ಪ್ರದೇಶದಲ್ಲಿರುವ 11 ಕೆ.ವಿ/ ಎಲ್.ಟಿ ಮೇಲ್ಮಾರ್ಗಗಳನ್ನು ಭೂಗತ ಕೇಬಲ್/ಏರಿಯಲ್ ಬಂಚ್ ಕೇಬಲ್ ಮಾರ್ಗಗಳನ್ನಾಗಿ ಪರಿವರ್ತಿಸುವುದು ಮತ್ತು ಭೂಗತ ಕೇಬಲ್ ಜೊತೆಗೆ ಆಪ್ಟಿಕಲ್ ಫೈಬರ್ ಕೇಬಲ್ ಅಳವಡಿಸುವುದು –ಹಂತ–01 | **S-20** Sub division of **H.S.R division**, Bangalore **SOUTH Circle, BMAZ (SOUTH)**, BESCOM | **10098.35** | 169.00 | 0.00 | 76.03 | **M/s. Asian Fab Tec Limited, Bangalore** |
| | **RC-02 Dt:15.07.2019** | | **E-6 & E-10** Sub divisions of **INDIRANAGAR** division, Bangalore **EAST Circle, BMAZ (NORTH)**, BESCOM | **21947.21** | 233.08 | 704.01 | 280.02 | **M/s. Larson & Toubro Limited, Chennai** |
| | **RC-03 Dt:15.07.2019** | | **N-5 & N-7** Sub divisions of **PEENYA** division, Bangalore **NORTH Circle, BMAZ (NORTH)**, BESCOM | **32283.69** | 332.84 | 0.00 | 1348.45 | **M/s. Asian Fab Tec Limited, Bangalore** |
| | **RC-04 Dt:15.07.2019** | | **C-1, C-2 & C-6** Sub divisions of **MALLESHWARAM** division, Bangalore **NORTH Circle, BMAZ (NORTH)**, BESCOM | **10906.15** | 89.13 | 385.94 | 123.30 | **M/s. Larson & Toubro Limited, Chennai** |
| | **RC-05 Dt:15.07.2019** | | **N-1, N-2, N-3, N-6, N-8 & N-10** Sub divisions of **RAJAJINAGAR** division, Bangalore **WEST Circle, BMAZ (SOUTH)**, BESCOM | **31575.06** | 362.98 | 0.00 | 1224.93 | **M/s. Asian Fab Tec Limited, Bangalore** |
| | | | **PHASE-I - SUB TOTAL - 14 Sub Divisions** | **106810.46** | **1187.03** | **1089.95** | **3052.73** | |
| 2019-20 | **RC-06 Dt:15.07.2019** | ಬೆ.ವಿ.ಕಂ. ವ್ಯಾಪ್ತಿಯಲ್ಲಿ ಬೆಂ.ಮ.ಕ್ಷೇತ್ರ ವಲಯ ಪ್ರದೇಶದಲ್ಲಿರುವ 11 ಕೆ.ವಿ/ ಎಲ್.ಟಿ ಮೇಲ್ಮಾರ್ಗಗಳನ್ನು ಭೂಗತ ಕೇಬಲ್/ಏರಿಯಲ್ ಬಂಚ್ ಕೇಬಲ್ ಮಾರ್ಗಗಳನ್ನಾಗಿ ಪರಿವರ್ತಿಸುವುದು ಮತ್ತು ಭೂಗತ ಕೇಬಲ್ ಜೊತೆಗೆ ಆಪ್ಟಿಕಲ್ ಫೈಬರ್ ಕೇಬಲ್ ಅಳವಡಿಸುವುದು –ಹಂತ–02 | **S-1, S-2, S-6, S-14 & S-15** Sub divisions of **JAYANAGAR** division, Bangalore **SOUTH Circle, BMAZ (SOUTH)**, BESCOM | **30833.24** | 358.16 | 33.20 | 1056.86 | **M/s. Asian Fab Tec Limited, Bangalore** |
| | **RC-07 Dt:15.07.2019** | | **W-1, W-2, W-6, W-7 & W-8** Sub divisions of **R. R. NAGAR** division, Bangalore **WEST Circle, BMAZ (SOUTH)**, BESCOM | **18671.04** | 285.18 | 14.53 | 469.38 | **M/s. Kumar Electricals, Bangalore** |
| | **RC-08 Dt:15.07.2019** | | **E-1 & E-5** Sub divisions of **SHIVAJINAGAR** division, Bangalore **EAST Circle, BMAZ (NORTH)**, BESCOM | **18875.64** | 311.04 | 82.55 | 307.97 | **M/s. Asian Fab Tec Limited, Bangalore** |
| | **RC-09 Dt:15.07.2019** | | **E-11** Sub division of **INDIRANAGAR** division, Bangalore **EAST Circle, BMAZ (NORTH)**, BESCOM | **23020.89** | 260.28 | 146.30 | 524.68 | **M/s. NCC Limited, Hyderabad** |
| | **RC-10 Dt:15.07.2019** | | **C-7** Sub division of **HEBBAL** division, Bangalore **NORTH Circle, BMAZ (NORTH)**, BESCOM | **22331.90** | 347.50 | 0.00 | 403.83 | **M/s. Larson & Toubro Limited, Chennai** |
| | **RC-11 Dt:15.07.2019** | | **C-8** Sub division of **HEBBAL** division, Bangalore **NORTH Circle, BMAZ (NORTH)**, BESCOM | **19869.50** | 314.75 | 4.20 | 391.03 | **M/s. Asian Fab Tec Limited, Bangalore** |
| | | | **PHASE-II - SUB TOTAL - 15 Sub Divisions** | **133602.20** | **1876.90** | **280.78** | **3153.75** | |
| 2020-21 | **RC-12 Dt: 30.04.2020** | ಬೆ.ವಿ.ಕಂ. ವ್ಯಾಪ್ತಿಯಲ್ಲಿ ಬೆಂ.ಮ.ಕ್ಷೇತ್ರ ವಲಯ ಪ್ರದೇಶದಲ್ಲಿರುವ 11 ಕೆ.ವಿ /ಎಲ್.ಟಿ ಮೇಲ್ಮಾರ್ಗಗಳನ್ನು ಭೂಗತ ಕೇಬಲ್/ಏರಿಯಲ್ | **S-5 & S-9** Sub divisions of **JAYANAGAR** division, Bangalore **SOUTH Circle, BMAZ (SOUTH)**, BESCOM | **9793.82** | 137.12 | 0.00 | 217.37 | **M/s. NCC Limited, Hyderabad** |
| | **RC-13 Dt: 30.04.2020** | | **S-18** Sub division of **JAYANAGAR** division, Bangalore **SOUTH Circle, BMAZ (SOUTH)**, BESCOM | **11599.52** | 182.15 | 0.00 | 150.11 | **M/s. Aravinda Electricals, Bangalore** |
| | **RC-14 Dt: 30.04.2020** | | **K-1 & K-4** Sub divisions of **KENGERI** division, Bangalore **WEST Circle, BMAZ (SOUTH)**, BESCOM | **24961.69** | 452.48 | 0.00 | 438.96 | **M/s. NCC Limited, Hyderabad** |

| | | | | | | | | |
|---|---|---|---|---|---|---|---|---|
| | | ಬಂಚ್ ಕೇಬಲ್ ಮಾರ್ಗಗಳನ್ನಾಗಿ ಪರಿವರ್ತಿಸುವುದು ಮತ್ತು ಭೂಗತ ಕೇಬಲ್ ಜೊತೆಗೆ ಆಪ್ಟಿಕಲ್ ಫೈಬರ್ ಕೇಬಲ್ ಅಳವಡಿಸುವುದು –ಹಂತ–03 | ಉಪವಿಭಾಗಗಳು | ಕಾರ್ಯಾದೇಶ ಮೊತ್ತ (ರೂ. ಕೋಟಿಗಳಲ್ಲಿ) | ಗುತ್ತಿಗೆ ವಹಿಸಿದ ಮಾರ್ಗಗಳ ಉದ್ದ | | | ಗುತ್ತಿಗೆದಾರರ ವಿವರ |
| | | | | | Length of 11 KV UG Cable Proposed in KM's | Length of 1.1KV LT UG Cable Proposed in KM's | Length of 1.1 KV AB Cable Proposed in KM's | |
| | RC-15 Dt: 30.04.2020 | | C-4 & C-5 Sub division of **HEBBAL** division, Bangalore **NORTH Circle, BMAZ (NORTH)**, BESCOM | **21957.88** | 358.88 | 0.00 | 388.53 | **M/s. Asian Fab Tec Limited, Bangalore** |
| | RC-16 Dt: 30.04.2020 | | K-2 Sub divisions of **KENGERI** division, Bangalore **WEST** Circle, **BMAZ (SOUTH)**, BESCOM | **14261.92** | 213.24 | 0.00 | 356.69 | **M/s. NCC Limited, Hyderabad** |
| | RC-17 Dt: 30.04.2020 | | C-9 Sub division of **JALAHALLI** division, Bangalore **NORTH Circle, BMAZ (NORTH)**, BESCOM | **19360.56** | 316.66 | 0.00 | 452.71 | **M/s. Asian Fab Tec Limited, Bangalore** |
| | RC-18 Dt: 30.04.2020 | | E-9 Sub division of **SHIVAJINAGAR** division, Bangalore **EAST Circle, BMAZ (NORTH)**, BESCOM | **24860.28** | 389.36 | 0.00 | 509.99 | **M/s. Larson & Toubro Limited, Chennai** |
| | | | **PHASE-III - SUB TOTAL - 10 Sub Divisions** | **126795.68** | **2049.89** | **0.00** | **2514.35** | |
| 2020-21 | T19/LOT-01 Dt: 11.02.2021 | ಬೆ.ವಿ.ಕಂ. ವ್ಯಾಪ್ತಿಯಲ್ಲಿ ಬೆಂ.ಮ.ಕ್ಷೇತ್ರ ವಲಯ ಪ್ರದೇಶದಲ್ಲಿರುವ 11 ಕೆ.ವಿ./ ಎಲ್.ಟಿ ಮೇಲ್ಮಾರ್ಗಗಳನ್ನು ಭೂಗತ ಕೇಬಲ್/ ಏರಿಯಲ್ ಬಂಚ್ ಕೇಬಲ್ ಮಾರ್ಗಗಳನ್ನಾಗಿ ಪರಿವರ್ತಿಸುವುದು ಮತ್ತು ಭೂಗತ ಕೇಬಲ್ ಜೊತೆಗೆ ಆಪ್ಟಿಕಲ್ ಫೈಬರ್ ಕೇಬಲ್ ಅಳವಡಿಸುವುದು– ಹಂತ–04–ಎ.ಡಿ.ಬಿ. ಸಾವರಿನ್ ಲೋನ್ | **S-4, S-7 & S-17** Sub divisions of **KORAMANGALA** division, Bangalore **SOUTH Circle, BMAZ (SOUTH)**, BESCOM | **23033.55** | 301.52 | 37.04 | 303.07 | **M/s. V. R Patil Vividh Vidyuth Nirman Pvt. Ltd, Koppal (Lead Bidder) in J.V with M/s. Asian Fab Tec Limited, Bangalore** |
| | T19/LOT-02 Dt: 11.02.2021 | | **S-8 & S-11** Sub divisions of **HSR** division, Bangalore **SOUTH Circle, BMAZ (SOUTH)**, BESCOM | **22820.07** | 383.47 | 7.35 | 334.17 | **M/s. Rajashree Electricals, Davanagere (Lead Bidder) in J.V with M/s. Asian Fab Tec Limited, Bangalore** |
| | T19/LOT-03 Dt: 11.02.2021 | | S-12 Sub division of **HSR** division, Bangalore **SOUTH** Circle, **BMAZ (SOUTH)**, BESCOM | **19522.27** | 267.45 | 7.19 | 506.80 | **M/s. Kumar Electricals, Bangalore (Lead Bidder) in J.V with M/s. K.E.I Industries Limited, Rajasthan** |
| | T19/LOT-04 Dt: 11.02.2021 | | E-4 Sub division of **WHITEFEILD** division, Bangalore EAST **Circle, BMAZ (NORTH)**, BESCOM | **21220.39** | 280.87 | 166.42 | 351.42 | **M/s. Rajashree Electricals, Davanagere (Lead Bidder) in J.V with M/s. Asian Fab Tec Limited, Bangalore** |
| 2020-21 | RC-23 Dt: 10.02.2021 | ಬೆ.ವಿ.ಕಂ. ವ್ಯಾಪ್ತಿಯಲ್ಲಿ ಬೆಂ.ಮ.ಕ್ಷೇತ್ರ ವಲಯ ಪ್ರದೇಶದಲ್ಲಿರುವ 11 ಕೆ.ವಿ./ ಎಲ್.ಟಿ ಮೇಲ್ಮಾರ್ಗಗಳನ್ನು ಭೂಗತ ಕೇಬಲ್/ ಏರಿಯಲ್ ಬಂಚ್ ಕೇಬಲ್ ಮಾರ್ಗಗಳನ್ನಾಗಿ ಪರಿವರ್ತಿಸುವುದು ಮತ್ತು ಭೂಗತ ಕೇಬಲ್ ಜೊತೆಗೆ ಆಪ್ಟಿಕಲ್ ಫೈಬರ್ ಕೇಬಲ್ ಅಳವಡಿಸುವುದು– ಹಂತ–04– ಎಸ್.ಬಿ.ಐ ಲೋನ್ | S-3 Sub division of **KORAMANGALA** division, Bangalore **SOUTH Circle, BMAZ (SOUTH)**, BESCOM | **5645.17** | 93.00 | 0.00 | 145.30 | **M/s. Aravinda Electricals, Bangalore** |
| | RC-24 Dt: 10.02.2021 | | S-16 Sub division of **KORAMANGALA** division, Bangalore **SOUTH Circle, BMAZ (SOUTH)**, BESCOM | **7872.45** | 108.60 | 31.40 | 131.00 | **M/s. Transglobal Power Limited, Banaglore** |
| | RC-25 Dt: 10.02.2021 | | **C-3 & N-9** Sub divisions of **JALAHALLI** division, Bangalore **NORTH Circle, BMAZ (NORTH)**, BESCOM | **15871.89** | 274.25 | 0.00 | 295.04 | **M/s. Larson & Toubro Limited, Chennai** |
| | RC-26 Dt: 10.02.2021 | | **E-7** Sub division of **WHITEFEILD** division, Bangalore **EAST Circle, BMAZ (NORTH)**, BESCOM | **8081.25** | 119.50 | 0.00 | 211.50 | **M/s. Rajashree Electricals, Davanagere** |
| | RC-27 Dt: 10.02.2021 | | E-12 Sub division of **WHITEFEILD** division, Bangalore **EAST Circle, BMAZ (NORTH)**, BESCOM | **11890.29** | 209.24 | 4.28 | 113.40 | **M/s. Larson & Toubro Limited, Chennai** |
| | | | **PHASE-IV (SBI) - SUB TOTAL - 13 Sub Divisions** | **135957.33** | **2037.90** | **253.68** | **2391.70** | |
| | | | **GRAND TOTAL - 52 Sub Divisions** | **503165.67** | **7151.72** | **1624.41** | **11112.52** | |

ಅನುಬಂಧ-4

ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಕುಮಾರಸ್ವಾಮಿ.ಹೆಚ್.ಕೆ. ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1238ಕ್ಕೆ,
ಅನುಬಂಧ-4

**ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ವಿದ್ಯುತ್ ಅಭಿವೃದ್ಧಿ ಕಾಮಗಾರಿಗಳನ್ನು ವರ್ಷಾವಾರು ವಹಿಸಲಾದ ಗುತ್ತಿಗೆದಾರರ ವಿವರಗಳು**

**ಆರ್ಥಿಕ ವರ್ಷ-2017-18**

| ಕ್ರಮ ಸಂಖ್ಯೆ | ಯೋಜನೆಗಳು | ಗುತ್ತಿಗೆದಾರರ ವಿವರ | |
|---|---|---|---|
| 1 | ಗಂಗಾ ಕಲ್ಯಾಣ ಯೋಜನೆ | ಬೆವಿಕಂನಲ್ಲಿ ಗಂಗಾ ಕಲ್ಯಾಣ ಯೋಜನೆಯಡಿ 5 ಅಭಿವೃದ್ಧಿ ನಿಗಮಗಳು ಒಳಗೊಂಡಿದ್ದು. ಸದರಿ ನಿಗಮಗಳಿಂದ ವಿದ್ಯುದ್ದೀಕರಣಕ್ಕಾಗಿ ನೊಂದಣಿಗೊಳ್ಳುವ ಅರ್ಜಿಗಳಿಗೆ ಮೂಲಭೂತ ಸೌಕರ್ಯ ಒದಗಿಸಲು ವಿಭಾಗ/ಉಪವಿಭಾಗವಾರು ವೃತ್ತ ಕಚೇರಿಗಳಿಂದ ಟೆಂಡರ್ ಕರೆದು. ವಿದ್ಯುದ್ದೀಕರಣ ಕಾಮಗಾರಿಯನ್ನು ಪೂರ್ಣಗೊಳಿಸಲಾಗುತ್ತಿದೆ. | |
| 2 | ಎಸ್ ಡಿ ಪಿ | ಬೆವಿಕಂನಲ್ಲಿ ಎಸ್.ಡಿ.ಪಿ ಮತ್ತು ಈಕ್ವಿಟಿಯಡಿಯಲ್ಲಿ, ಹೊಸ ವಿದ್ಯುತ್ ಕೇಂದ್ರಗಳಿಂದ ಹೊಸ ಮಾರ್ಗಗಳನ್ನು ನಿರ್ಮಿಸುವುದು, ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸುವುದು/ಸಾಮರ್ಥ್ಯವನ್ನು ಹೆಚ್ಚಿಸುವುದು, ಮೇಲ್ಮಾರ್ಗ/ಭೂಗತ ಕೇಬಲ್/ಕವರ್ಡ್ ವಾಹಕ/ಏರಿಯಲ್ ಬಂಚ್ ಕೇಬಲ್ಒಳಗೊಂಡಂತೆ, ಎಚ್.ಟಿ/ಎಲ್.ಟಿ ಕಾರ್ಯಜಾಲವನ್ನು ಬಲಪಡಿಸುವುದು, ಸ್ಥಳಿಯ ಯೋಜನೆಗಳು,ಸುರಕ್ಷಾ ಕೆಲಸಗಳು, ತುರ್ತು/ನೈಸರ್ಗಿಕ ವಿಕೋಪ ಕಾಮಗಾರಿಗಳನ್ನು ನಿರ್ವಹಿಸಲಾಗುವುದು. ಸದರಿ ಹಣಕಾಸು ವರ್ಷದಲ್ಲಿ ಮೇಲೆ ತಿಳಿಸಿರುವ ಕಾಮಗಾರಿಗಳಿಗೆ ವೃತ್ತವಾರು ಬಜೆಟ್ ಬಿಡುಗಡೆಮಾಡಿ ವಿದ್ಯುದ್ದೀಕರಣ ಕಾಮಗಾರಿಯನ್ನು ಪೂರ್ಣಗೊಳಿಸಲಾಗುತ್ತಿದೆ. | |
| 3 | ಈಕ್ವಿಟಿ | | |
| 4 | ಆರ್ ಎ ಪಿ ಡಿ ಆರ್ ಪಿ ಭಾಗ-ಎ | 1).60/2009-10/23.02.2010 and revised DWA BESCOM(ICT&MIS)/2017-18/3696-722/22.12.2017 2).98/05.12.16 3).BESCOM(ICT&MIS)/BC-48/605-13/07.09.2015 4).99/2011-12/04.06.2011 | 1).ಮೆ//ಇನ್ಫೋಸಿಸ್ ಲಿಮಿಟೆಡ್, ಮೆ// 2).ರಿಲೆಯನ್ಸ್ ಕಮ್ಯೂನಿಕೇಶನ್ಸ್ ಲಿಮಿಟೆಡ್, 3).ಮೆ//ಇ&ವೈ 4). ಮೇ// ಭಾರತಿ ಏರ್ ಟೆಲ್ ಲಿಮಿಟೆಡ್ |
| 5 | ಡಿ.ಡಿ.ಯು.ಜಿ.ಜೆ.ವೈ ಯೋಜನೆ | ANK-09 (A) & (B) /24.05.2017 | ಎಮ್.ಇ ಎಲೆಕ್ಟ್ರಿಕಲ್ಸ್ |
| | | CBP-15 (A) & (B) /15.03.2017 | ಆರ್.ಕೆ ಅಸೋಸಿಯೇಟ್ಸ್ |
| | | BRC-08 (A) & (B) /24.05.2017 | ಮಂಜು ಎಲೆಕ್ಟ್ರಿಕಲ್ಸ್ |
| | | CTA-16 (A) & (B) /15.03.2017 | ರಾಜಾ ಎಲೆಕ್ಟ್ರಿಕಲ್ಸ್ |
| | | DVG-14 (A) & (B) /15.03.2017 | ಪ್ರಕಾಶಾ ಮೋಟಾರ್ಸ್ |
| | | KLR-11 (A) & (B) /15.03.2017 | ಟ್ರಾನ್ಸ್‌ಗ್ಲೋಬಲ್ ಪವರ್ ಲಿಮಿಟೆಡ್, |
| | | RMG-13 (A) & (B) /15.03.2017 | ಶ್ರೀ ಲಕ್ಷ್ಮೀನರಸಿಂಹ |
| | | TKR-12 (A) & (B) /15.03.2017 | ಟ್ರಾನ್ಸ್‌ಗ್ಲೋಬಲ್ ಪವರ್ ಲಿಮಿಟೆಡ್, |

| ಕ್ರಮ ಸಂಖ್ಯೆ | ಯೋಜನೆಗಳು | ಗುತ್ತಿಗೆದಾರರ ವಿವರ | |
|---|---|---|---|
| 6 | ಐ.ಪಿ.ಡಿ.ಎಸ್ ಯೋಜನೆ | BESCOM/CGM(Proj)/DGM-3/BC-14/16-17/6195-05 & BESCOM/CGM(Proj)/DGM-3/BC-14/16-17/6206-16 Date:17.03.2017<br>BESCOM/BC-51/2017-18/1085-94 Date:28.09.2017<br>GM(M&C)/18-19/CYS-14 Date:21.06.2018<br>GM(M&C)/49/17-18/CYS-36 Date: 09.02.2018<br>GM(M&C)/18-19/CYS-17 Date:04.07.2018 | ಎಲ್ & ಟಿ ಲಿಮಿಟೆಡ್, ಐಸಿ ಇಂಡಿಯಾ ಪ್ರೈವೇಟ್ ಲಿಮಿಟೆಡ್, ಬನಾವತಿ ಪವರ್ ಸಿಸ್ಟಮ್ ಪ್ರೈವೇಟ್ ಲಿಮಿಟೆಡ್, ಅನಲಾಗ್ನಿವ್ಸ್ ಟೆಕ್ ಇಂಡಿಯಾ ಲಿಮಿಟೆಡ್, ಸ್ಪಾರ್ಕ್ ಎಲೆಕ್ಟ್ರಿಕಲ್ಸ್ |
| | | BESCOM/CGM(Proj)/DGM-3/BC-14/16-17/6217-27 & BESCOM/CGM(Proj)/DGM-3/BC-14/16-17/6228-38 Date: 17.03.2017<br>GM(M&C)/18-19/CYS-14 Date:21.06.2018<br>GM(M&C)/49/17-18/CYS-36 Date: 09.02.2018<br>GM(M&C)/18-19/CYS-17 Date:04.07.2018 | ಮ. ಮಾರುತಿ ಮೆಕ್ಯಾನಿಕಲ್ಸ್ & ಎಲೆಕ್ಟ್ರಿಕಲ್ಸ್ (ಪಿ) ಲಿಮಿಟೆಡ್, ಬನಾವತಿ ಪವರ್ ಸಿಸ್ಟಮ್ ಪ್ರೈವೇಟ್ ಲಿಮಿಟೆಡ್, ಅನಲಾಗಿವ್ಸ್ ಟೆಕ್ ಇಂಡಿಯಾ ಲಿಮಿಟೆಡ್, ಸ್ಪಾರ್ಕ್ ಎಲೆಕ್ಟ್ರಿಕಲ್ಸ್ |
| | | BESCOM/CGM(Proj)/DGM-3/BC-14/16-17/6131-41 & BESCOM/CGM(Proj)/DGM-3/BC-14/16-17/6142-52 Date:17.03.2017<br>GM(M&C)/18-19/CYS-14 Date:21.06.2018<br>GM(M&C)/49/17-18/CYS-36 Date: 09.02.2018<br>GM(M&C)/18-19/CYS-17 Date:04.07.2018 | ಟ್ರಾನ್ಸ್‌ಗ್ಲೋಬಲ್ ಪವರ್ ಲಿಮಿಟೆಡ್,<br>ಬನಾವತಿ ಪವರ್ ಸಿಸ್ಟಮ್ ಪ್ರೈವೇಟ್ ಲಿಮಿಟೆಡ್,<br>ಅನಲಾಗಿವ್ಸ್ ಟೆಕ್ ಇಂಡಿಯಾ ಲಿಮಿಟೆಡ್, ಸ್ಪಾರ್ಕ್ ಎಲೆಕ್ಟ್ರಿಕಲ್ಸ್ |
| | | BESCOM/IPDS/CGM(PROJ)/SUPPLY/2017-18/RMG-07(A) & BESCOM/IPDS/CGM(PRO)/ERECTION/2017-18/RMG-07(B) Date: 29.03.2017<br>GM(M&C)/18-19/CYS-14 Date:21.06.2018<br>GM(M&C)/49/17-18/CYS-36 Date: 09.02.2018<br>GM(M&C)/18-19/CYS-17 Date:04.07.2018 | ಏಷ್ಯನ್ ಫ್ಯಾಬ್ ಟೆಕ್ ಲಿಮಿಟೆಡ್, ಬನಾವತಿ ಪವರ್ ಸಿಸ್ಟಮ್ ಪ್ರೈವೇಟ್ ಲಿಮಿಟೆಡ್, ಅನಲಾಗ್ನಿವ್ಸ್ ಟೆಕ್ ಇಂಡಿಯಾ ಲಿಮಿಟೆಡ್, ಸ್ಪಾರ್ಕ್ ಎಲೆಕ್ಟ್ರಿಕಲ್ಸ್ |
| | | BESCOM/CGM(Proj)/DGM-3/BC-14/16-17/6153-63 & BESCOM/CGM(Proj)/DGM-3/BC-14/16-17/6164-74 Date:17.03.2017<br>BESCOM/BC-51/2017-18/1085-94 Date:28.09.2017<br>GM(M&C)/18-19/CYS-14 Date:21.06.2018<br>GM(M&C)/49/17-18/CYS-36 Date: 09.02.2018<br>GM(M&C)/18-19/CYS-17 Date:04.07.2018 | ಎಲ್ & ಟಿ ಲಿಮಿಟೆಡ್, ಐಸಿ ಇಂಡಿಯಾ ಪ್ರೈವೇಟ್ ಲಿಮಿಟೆಡ್, ಬನಾವತಿ ಪವರ್ ಸಿಸ್ಟಮ್ ಪ್ರೈವೇಟ್ ಲಿಮಿಟೆಡ್, ಅನಲಾಗ್ನಿವ್ಸ್ ಟೆಕ್ ಇಂಡಿಯಾ ಲಿಮಿಟೆಡ್, ಸ್ಪಾರ್ಕ್ ಎಲೆಕ್ಟ್ರಿಕಲ್ಸ್ |
| | | BESCOM/CGM(Proj)/DGM-3/BC-14/16-17/6175-84 & BESCOM/CGM(Proj)/DGM-3/BC-14/16-17/6185-94 Date:17.03.2017<br>BESCOM/BC-51/2017-18/1085-94 Date:28.09.2017<br>GM(M&C)/18-19/CYS-14 Date:21.06.2018<br>GM(M&C)/49/17-18/CYS-36 Date: 09.02.2018<br>GM(M&C)/18-19/CYS-17 Date:04.07.2018 | ಬಜಾಜ್ ಎಲೆಕ್ಟ್ರಿಕಲ್ಸ್ ಲಿಮಿಟೆಡ್, ಐಸಿ ಇಂಡಿಯಾ ಪ್ರೈವೇಟ್ ಲಿಮಿಟೆಡ್, ಬನಾವತಿ ಪವರ್ ಸಿಸ್ಟಮ್ ಪ್ರೈವೇಟ್ ಲಿಮಿಟೆಡ್, ಅನಲಾಗ್ಸ್ ಟೆಕ್ ಇಂಡಿಯಾ ಲಿಮಿಟೆಡ್, ಸ್ಪಾರ್ಕ್ ಎಲೆಕ್ಟ್ರಿಕಲ್ಸ್ |

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1321 |
| ಸದಸ್ಯರ ಹೆಸರು | : | ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಬಿಟಿಪಿಎಸ್, ವೈಟಿಪಿಎಸ್ ಮತ್ತು ಆರ್‌ಟಿಪಿಎಸ್ ಗಳು ಒಂದು ದಿನಕ್ಕೆ ಎಷ್ಟು ಯೂನಿಟ್ ವಿದ್ಯುತ್ ಉತ್ಪಾದಿಸುತ್ತಿದೆ; | ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಶಾಖೋತ್ಪನ್ನ ವಿದ್ಯುತ್ ಕೇಂದ್ರಗಳಾದ ಆರ್‌ಟಿಪಿಎಸ್, ಬಿಟಿಪಿಎಸ್ ಮತ್ತು ವೈಟಿಪಿಎಸ್, ಅವುಗಳ ಪ್ರಸ್ತುತ 2020-21ನೇ ಸಾಲಿನ (ದಿನಾಂಕ:01.04.2020 – 28.02.2021) ವಿದ್ಯುತ್ ಉತ್ಪಾದನಾ ವಿವರ ಕೆಳಕಂಡಂತಿವೆ: (ದಲಯೂಗಳಲ್ಲಿ) |

| ಶಾಖೋತ್ಪನ್ನ ವಿದ್ಯುತ್ ಕೇಂದ್ರ | 2020-21 (01.04.2020 – 28.02.2021) ವಿದ್ಯುತ್ ಉತ್ಪಾದನೆ | ಪ್ರತಿದಿನ ಸರಾಸರಿ ವಿದ್ಯುತ್ ಉತ್ಪಾದನೆ |
|---|---|---|
| ಆರ್‌ಟಿಪಿಎಸ್ | 2966.13 | 8.88 |
| ಬಿಟಿಪಿಎಸ್ | 2530.65 | 7.57 |
| ವೈಟಿಪಿಎಸ್ | 2926.96 | 8.76 |

| | ಪ್ರಶ್ನೆ | ಉತ್ತರ |
|---|---|---|
| ಆ) | ಬಿಟಿಪಿಎಸ್, ವೈಟಿಪಿಎಸ್ ಮತ್ತು ಆರ್‌ಟಿಪಿಎಸ್ ಗಳಲ್ಲಿ ಒಂದು ಯೂನಿಟ್ ಉತ್ಪಾದನೆಗೆ ಎಷ್ಟು ಹಣ ಖರ್ಚಾಗುವುದು; (ಸಂಪೂರ್ಣ ವಿವರವನ್ನು ನೀಡುವುದು); | ಈ ಪ್ಲಾಂಟ್‌ಗಳಲ್ಲಿ ಒಂದು ಯೂನಿಟ್ ಉತ್ಪಾದನೆಗೆ ತಗಲುವ ಖರ್ಚಿನ ವಿವರಗಳನ್ನು **ಅನುಬಂಧ-1**ರಲ್ಲಿ ನೀಡಲಾಗಿದೆ |
| ಇ) | ಬಿಟಿಪಿಎಸ್, ವೈಟಿಪಿಎಸ್ ಮತ್ತು ಆರ್‌ಟಿಪಿಎಸ್ ಗಳು ಸರ್ಕಾರಕ್ಕೆ ಒಂದು ಯೂನಿಟ್ ವಿದ್ಯುತ್‌ನ್ನು ಎಷ್ಟು ರೂಪಾಯಿಗಳಿಗೆ ಮಾರಾಟ ಮಾಡಲಾಗುತ್ತಿದೆ? (ಸಂಪೂರ್ಣ ವಿವರವನ್ನು ನೀಡುವುದು); | ಈ ಪ್ಲಾಂಟ್‌ಗಳಲ್ಲಿ ಒಂದು ಯೂನಿಟ್‌ನ ಮಾರಾಟ ದರದ ವಿವರಗಳನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ |

ಸಂಖ್ಯೆ: ಎನರ್ಜಿ 56 ಪಿಪಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

Q. No. 1321

## ಅನುಬಂಧ-1

ರೂ./ಯೂನಿಟ್

| ಕೇಂದ್ರ | ಪ್ರತಿ ಯೂನಿಟ್‌ನ ಉತ್ಪಾದನೆಗೆ ತಗಲುವ ವೆಚ್ಚ ಡಿಸೆಂಬರ್ 2020ರಂತೆ | | |
|---|---|---|---|
| | ಸ್ಥಿರ ವೆಚ್ಚ | ವೇರಿಯಬಲ್ ವೆಚ್ಚ | ಒಟ್ಟು ವೆಚ್ಚ |
| ರಾಶಾವಿಕೇಂದ್ರ ಘಟಕ **1-7** | 0.77 | 2.90 | **3.67** |
| ರಾಶಾವಿಕೇಂದ್ರ ಘಟಕ **-8** | 1.15 | 2.90 | **4.05** |
| ಬಶಾವಿಕೇಂದ್ರ ಘಟಕ **-1** | 0.76 | 2.95 | **3.71** |
| ಬಶಾವಿಕೇಂದ್ರ ಘಟಕ **-2** | 1.05 | 2.80 | **3.85** |
| ಬಶಾವಿಕೇಂದ್ರ ಘಟಕ **-3** | 1.60 | 2.80 | **4.41** |
| ಯಶಾವಿಕೇಂದ್ರ ಘಟಕ **-1 & 2** | 1.77 | 2.70 | **4.48** |

## ಅನುಬಂಧ-2

ರೂ./ಯೂನಿಟ್

| ಕೇಂದ್ರ | ಪ್ರತಿ ಯೂನಿಟ್‌ನ ಮಾರಾಟ ದರ ಡಿಸೆಂಬರ್ 2020ರಂತೆ | | |
|---|---|---|---|
| | ಸಾಮರ್ಥ್ಯದ ಚಾರ್ಜಸ್ | ವೇರಿಯಬಲ್ ಚಾರ್ಜಸ್ | ಮಾರಾಟ ದರ |
| ರಾಶಾವಿಕೇಂದ್ರ ಘಟಕ **1-7** | 0.90 | 2.90 | **3.80** |
| ರಾಶಾವಿಕೇಂದ್ರ ಘಟಕ **-8** | 1.31 | 2.90 | **4.21** |
| ಬಶಾವಿಕೇಂದ್ರ ಘಟಕ **-1** | 0.92 | 2.95 | **3.87** |
| ಬಶಾವಿಕೇಂದ್ರ ಘಟಕ **-2** | 1.23 | 2.80 | **4.03** |
| ಬಶಾವಿಕೇಂದ್ರ ಘಟಕ **-3** | 1.97 | 2.80 | **4.77** |
| ಯಶಾವಿಕೇಂದ್ರ ಘಟಕ **-1 & 2** | 2.10 | 2.70 | **4.80** |

33

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1345 |
| ಸದಸ್ಯರ ಹೆಸರು | : | ಶ್ರೀ ಶಿವಲಿಂಗೇಗೌಡ ಕೆ.ಎಂ. (ಅರಸೀಕೆರೆ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| ಪ್ರಶ್ನೆ | | ಉತ್ತರ |
|---|---|---|
| ಅ) | ಅರಸೀಕೆರೆ ಕ್ಷೇತ್ರದಲ್ಲಿ ಕಣಕಟ್ಟೆ ಮತ್ತು ಬೆಂಡೆಕೆರೆ ಗ್ರಾಮದಲ್ಲಿ ಹೊಸ ವಿದ್ಯುತ್ ಉಪವಿಭಾಗಗಳನ್ನು ತೆರೆಯುವ ಪ್ರಸ್ತಾವನೆ ಸಲ್ಲಿಕೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ವ್ಯಾಪ್ತಿಯಲ್ಲಿರುವ ಅರಸೀಕೆರೆ ವಿಧಾನಸಭಾ ಕ್ಷೇತ್ರದಲ್ಲಿ ಹೊಸ ಉಪವಿಭಾಗಗಳನ್ನು ಸ್ಥಾಪಿಸುವ ಪ್ರಸ್ತಾವನೆ ಪರಿಶೀಲನಾ ಹಂತದಲ್ಲಿರುತ್ತದೆ. |
| ಆ) | ಹೊಸ ವಿದ್ಯುತ್ ಉಪ ವಿಭಾಗಗಳನ್ನು ಸ್ಥಾಪಿಸುವ ಉದ್ದೇಶ/ ಆಸಕ್ತಿ ಸರ್ಕಾರಕ್ಕಿದೆಯೇ; ಇದ್ದಲ್ಲಿ, ಯಾವಾಗ ಸ್ಥಾಪಿಸಲಾಗುವುದು? | |

ಸಂಖ್ಯೆ: ಎನರ್ಜಿ 65 ಪಿಪಿಎಂ 2021

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1213 |
| ಸದಸ್ಯರ ಹೆಸರು | : | ಶ್ರೀ ಮುನಿಯಪ್ಪ ವಿ. (ಶಿಡ್ಲಘಟ್ಟ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯ ಮಂತ್ರಿಯವರು |

******

| | ಪ್ರಶ್ನೆ | ಉತ್ತರ |
|---|---|---|
| ಅ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಗ್ರಾಮಾಂತರ ಪ್ರದೇಶಗಳಲ್ಲಿ ಹಳೆಯ ಕಬ್ಬಿಣದ ವಿದ್ಯುತ್ ಕಂಬ ಮತ್ತು ಹಳೆಯ ವಿದ್ಯುತ್ ತಂತಿಗಳನ್ನು ಬದಲಾವಣೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಶಿಡ್ಲಘಟ್ಟ ವಿಧಾನ ಸಭಾ ಕ್ಷೇತ್ರದ ಗ್ರಾಮಾಂತರ ಪ್ರದೇಶಗಳಲ್ಲಿರುವ ಕಬ್ಬಿಣದ ವಿದ್ಯುತ್ ಕಂಬಗಳು ಹಾಗೂ ಹಳೆಯದಾದ ವಿದ್ಯುತ್ ತಂತಿಗಳನ್ನು ಫೆಬ್ರವರಿ 2021ರ ಅಂತ್ಯದವರೆಗೆ ಗುರುತಿಸಲಾಗಿದ್ದು, ಅವುಗಳ ಪೈಕಿ 51 ಗ್ರಾಮಗಳಲ್ಲಿ 234 ಸಂಖ್ಯೆಯ ಕಬ್ಬಿಣದ ವಿದ್ಯುತ್ ಕಂಬಗಳನ್ನು ಹಾಗೂ 198 ಗ್ರಾಮಗಳಲ್ಲಿ ಹಳೆಯದಾದ 405 ಸರ್ಕ್ಯೂಟ್ ಕಿ.ಮೀ. ನಷ್ಟು ವಿದ್ಯುತ್ ತಂತಿಯನ್ನು ಬದಲಾಯಿಸಲಾಗಿರುತ್ತದೆ. ಬಾಕಿ ಇರುವ ವಿದ್ಯುತ್ ಕಂಬ ಮತ್ತು ವಿದ್ಯುತ್ ತಂತಿಗಳನ್ನು ಹಂತ-ಹಂತವಾಗಿ ಬದಲಾಯಿಸಲು ಕ್ರಮ ಕೈಗೊಳ್ಳಲಾಗಿದೆ. ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ.<br><br>ಹಳೆಯ ಕಬ್ಬಿಣ ಕಂಬ ಮತ್ತು ಹಳೆಯ ವಿದ್ಯುತ್ ತಂತಿಗಳನ್ನು ಬದಲಾವಣೆ ಮಾಡಲು 2021-22ನೇ ಆರ್ಥಿಕ ವರ್ಷದ ಬಜೆಟ್‌ನಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಅನುಮೋದನೆಗೊಂಡ ಪ್ರಸ್ತಾವನೆಗಳಿಗೆ ಅಂದಾಜು ಪಟ್ಟಿಯನ್ನು ತಯಾರಿಸಿ, ಹಳೆಯ ಕಬ್ಬಿಣ ಕಂಬ ಮತ್ತು ಹಳೆಯ ವಿದ್ಯುತ್ ತಂತಿಗಳನ್ನು ಶೀಘ್ರವಾಗಿ ಬದಲಾಯಿಸಲು ಕ್ರಮ ಕೈಗೊಳ್ಳಲಾಗಿತ್ತಿದೆ |
| ಆ) | ಹಾಗಿದ್ದಲ್ಲಿ, ಇದುವರೆಗೆ ಎಷ್ಟು ಗ್ರಾಮಗಳಲ್ಲಿ ಬದಲಾವಣೆ ಮಾಡಲಾಗಿದೆ ಹಾಗೂ ಇನ್ನೂ ಬಾಕಿ ಇರುವ ಗ್ರಾಮಗಳು ಎಷ್ಟು; (ವಿವರ ಒದಗಿಸುವುದು) | |
| ಇ) | ಸಂಪೂರ್ಣವಾಗಿ ಹಳೆಯ ಕಬ್ಬಿಣದ ವಿದ್ಯುತ್ ಕಂಬಗಳನ್ನು ಮತ್ತು ಹಳೆಯ ವಿದ್ಯುತ್ ತಂತಿಗಳನ್ನು ತೆರವುಗೊಳಿಸಲು ಕಾಲಾವಕಾಶ ನಿಗದಿಯಾಗಿದೆಯೇ; (ವಿವರ ನೀಡುವುದು) | |
| ಈ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದ ಹಲವಾರು ಗ್ರಾಮಗಳಲ್ಲಿ ಶಾಲಾ ಕಾಲೇಜು ಮತ್ತು ದೇವಾಲಯಗಳ ಬಳಿ ವಿದ್ಯುತ್ ಪರಿವರ್ತಕಗಳು ಇರುವುದರಿಂದ ಶಾಲಾ ಕಾಲೇಜಿನ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶಿಡ್ಲಘಟ್ಟ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಶಾಲಾ-ಕಾಲೇಜು ಹಾಗೂ ದೇವಾಲಯಗಳ ಬಳಿ ಇರುವ 40 ಸಂಖ್ಯೆಯ ವಿದ್ಯುತ್ಪರಿವರ್ತಕಗಳನ್ನು ಸೂಕ್ತ ಸ್ಥಳಗಳಿಗೆ ಸ್ಥಳಾಂತರಿಸಲಾಗಿರುತ್ತದೆ. |
| ಉ) | ಹಾಗಿದ್ದಲ್ಲಿ, ಇಂತಹ ವಿದ್ಯುತ್ ಪರಿವರ್ತಕಗಳನ್ನು ಬೇರೆ ಕಡೆಗೆ ಬದಲಾವಣೆ ಮಾಡಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? | |

**ಸಂಖ್ಯೆ: ಎನರ್ಜಿ 38 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಪ್ರಶ್ನೆ ಸಂಖ್ಯೆ1213 ಕ್ಕೆ ಅನುಬಂಧ

**ಶಿಡ್ಲಘಟ್ಟ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಗ್ರಾಮಾಂತರ ಪ್ರದೇಶದಲ್ಲಿ ಫೆಬ್ರವರಿ 2021ರ ಅಂತ್ಯಕ್ಕೆ ಬದಲಾಯಿಸಲಾದ ವಿದ್ಯುತ್ ಕಂಬಗಳ ಹಾಗೂ ಹಳೆಯದಾದ ವಿದ್ಯುತ್ ತಂತಿಯ ವಿವರಗಳು:**

| ಗುರುತಿಸಲಾದ ಗ್ರಾಮಗಳ ಸಂಖ್ಯೆ | ವಿದ್ಯುತ್ ಕಬ್ಬಿಣದ ಕಂಬಗಳ ಸಂಖ್ಯೆ | | | ಹಳೆಯದಾದ ವಿದ್ಯು ತ್ತಂತಿಗಳು (ಸರ್ಕ್ಯೂಟ್ ಕಿ.ಮೀ .ಗಳಲ್ಲಿ) | | |
|---|---|---|---|---|---|---|
| | ಒಟ್ಟು ಗುರುತಿಸಲಾದ ವಿದ್ಯುತ್ ಕಂಬಗಳ ಸಂಖ್ಯೆ | ಬದಲಾಯಿಸಲಾಗಿರುವುದು | ಬದಲಾಯಿಸಲು ಬಾಕಿ ಇರುವುದು | ಒಟ್ಟು ಗುರುತಿಸಲಾದ ಹಳೆಯದಾದ ವಿದ್ಯುತ್ತಂತಿಗಳು | ಬದಲಾಯಿಸಲಾಗಿರುವುದು | ಬದಲಾಯಿಸಲು ಬಾಕಿ ಇರುವುದು |
| 51 (ವಿದ್ಯುತ್ ಕಬ್ಬಿಣದ ಕಂಬಗಳನ್ನು ಬದಲಾಯಿಸಲು ಗುರುತಿಸಿರುವ ಗ್ರಾಮಗಳು) | 405 | 234 | 171 | – | – | – |
| 198 (ಹಳೆಯದಾದ ವಿದ್ಯುತ್ತಂತಿಗಳನ್ನು ಬದಲಾಯಿಸಲು ಗುರುತಿಸಿರುವ ಗ್ರಾಮಗಳು) | – | – | – | 540 | 405 | 135 |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1237 |
| ಸದಸ್ಯರ ಹೆಸರು | : | ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನಲ್ಲಿ ಸ್ಥಾಪಿಸಿರುವ ಸೋಲಾರ್ ಪಾರ್ಕ್ ಅಭಿವೃದ್ಧಿ ಮತ್ತು ಕಾಮಾಗಾರಿಗೆ ಮಾಡಿರುವ ವೆಚ್ಚವೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ಮತ್ತು ಸೋಲಾರ್ ಎನರ್ಜಿ ಕಾರ್ಪೋರೇಷನ್ ಆಫ್ ಇಂಡಿಯಾರವರ ಜಂಟಿ ಸಹಯೋಗದೊಂದಿಗೆ ಸ್ಥಾಪಿತವಾದ ಕರ್ನಾಟಕ ಸೌರ ಶಕ್ತಿ ಅಭಿವೃದ್ಧಿ ನಿಗಮದ (ಕೆ.ಎಸ್.ಪಿ.ಡಿ.ಸಿ.ಎಲ್) ವತಿಯಿಂದ ರಾಜ್ಯದ ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕಿನ ನಾಗಲಮಡಿಕೆ ಹೋಬಳಿಯ ಐದು ಗ್ರಾಮಗಳಾದ ವಳ್ಳೂರು, ರಾಯಚೆರ್ಲು, ಕ್ಯಾತಗಾನಚೆರ್ಲು, ಬಳಸಮುದ್ರ ಮತ್ತು ತಿರುಮಣಿ ವ್ಯಾಪ್ತಿಯಲ್ಲಿ 2050 ಮೆ.ವ್ಯಾ. ಸೌರ ಪಾರ್ಕ್‌ನಲ್ಲಿ ನಿರ್ಮಿಸಲಾಗಿದೆ.<br><br>ಸೋಲಾರ್ ಪಾರ್ಕ್ ಅಭಿವೃದ್ಧಿ ಮತ್ತು ಕಾಮಗಾರಿಗಳಿಗೆ ಕರ್ನಾಟಕ ಸೌರ ಶಕ್ತಿ ಅಭಿವೃದ್ಧಿ ನಿಗಮವು ಮಾಡಿರುವ ವೆಚ್ಚ: ರೂ. 810.02 ಕೋಟಿಗಳು.<br><br>ಕೆ.ಎಸ್.ಪಿ.ಡಿ.ಸಿ.ಎಲ್. ಸಂಸ್ಥೆಯು ಟೆಂಡರ್‌ಗಳ ಮೂಲಕ ಸೌರ ಪಾರ್ಕಿನ ಮೂಲಸೌಕರ್ಯಗಳಾದ ಆಂತರಿಕ ಸಬ್ ಸ್ಟೇಷನ್‌ಗಳು (4 ಸಂಖ್ಯೆಯ 2X150MVA, 220/66kV ಸಬ್ ಸ್ಟೇಷನ್‌ಗಳು, (4 ಸಂಖ್ಯೆಯ 4X80MVA, 220/33kV ಸಬ್ ಸ್ಟೇಷನ್‌ಗಳು ಮತ್ತು 1 ಸಂಖ್ಯೆಯ 2X8MVA, 66/11kV ಸಬ್ ಸ್ಟೇಷನ್) ಹಾಗೂ ವಿದ್ಯುತ್ ಪ್ರಸರಣ ಮಾರ್ಗಗಳ ನಿರ್ಮಾಣ, 75 ಕಿ.ಮೀ.ಗಳಷ್ಟು ರಸ್ತೆ, ಬೀದಿ ದೀಪ, ಇತ್ಯಾದಿಗಳನ್ನು ಸ್ಥಾಪಿಸಿದೆ. ಬಿಡ್ ಮೂಲಕ ಆಯ್ಕೆಯಾದ ಸೌರಶಕ್ತಿ ಅಭಿವೃದ್ಧಿದಾರರು Plug and Play ಮಾದರಿ ಅಡಿಯಲ್ಲಿ ಪಾವಗಡ ಸೋಲಾರ್ ಪಾರ್ಕಿನಲ್ಲಿ 2050ಮೆ.ವ್ಯಾ. ಸಾಮರ್ಥ್ಯದ ಸೌರ ವಿದ್ಯುತ್ ಘಟಕಗಳನ್ನು ಸ್ಥಾಪಿಸಿರುತ್ತಾರೆ. |
| ಆ) | ಈ ಸೋಲಾರ್ ಪಾರ್ಕ್‌ನಲ್ಲಿ ಸ್ಥಾಪಿಸಿರುವ ಸೋಲಾರ್ ವಿದ್ಯುತ್ ಸಾಮರ್ಥ್ಯವೆಷ್ಟು (ಸಂಪೂರ್ಣ ಮಾಹಿತಿ ನೀಡುವುದು) | ಪಾವಗಡ ಸೋಲಾರ್ ಪಾರ್ಕಿನಲ್ಲಿ ಸ್ಥಾಪಿತವಾದ ಸಾಮರ್ಥ್ಯ: 2050 ಮೆ.ವ್ಯಾ. |

**ಇ)** ಈ ಸೋಲಾರ್ ಪಾರ್ಕ್‌ನಲ್ಲಿ ಸ್ಥಾಪಿಸಲಾಗಿರುವ ಸೋಲಾರ್ ವಿದ್ಯುತ್ ಉತ್ಪಾದನಾ ಘಟಕಗಳನ್ನು ಯಾವ ಯಾವ ಸಂಸ್ಥೆಗಳ ಮುಖಾಂತರ ಸ್ಥಾಪಿಸಲಾಗಿದೆ; ಅವುಗಳ ಸಾಮರ್ಥ್ಯವನ್ನು ಒದಗಿಸುವುದು ಸದರಿ ಸಂಸ್ಥೆಗಳು ಮಾಡಿರುವ ವೆಚ್ಚವೆಷ್ಟು; (ಸಂಸ್ಥೆಗಳವಾರು, ಘಟಕಗಳವಾರು ಸಂಪೂರ್ಣ ಮಾಹಿತಿ ನೀಡುವುದು)

ಈ ಸೋಲಾರ್ ಪಾರ್ಕಿನಲ್ಲಿ ಸ್ಥಾಪಿಸಲಾಗಿರುವ ಸೋಲಾರ್ ವಿದ್ಯುತ್ ಉತ್ಪಾದನಾ ಘಟಕಗಳು ಕೆಳಕಂಡಂತಿವೆ:

| ಖಾಸಗಿ ಸಂಸ್ಥೆ | ಸಾಮರ್ಥ್ಯ ಮೆ.ವ್ಯಾ. |
|---|---|
| M/s. Parampujya Solar Energy Pvt Ltd, | 150 |
| M/s. Tata Power Renewable Energy Ltd | 150 |
| M/s. ACME Rewari Solar Power Pvt Ltd, &<br>M/s. ACME Kurukshetra Solar Energy Pvt Ltd | 50<br>50 |
| M/s. Fortum FinnSurya Energy Private Ltd | 100 |
| M/s. ReNew Wind Energy (TN2) Pvt Ltd, | 50 |
| M/s. Yarrow Infrastructure Ltd | 50 |
| M/s. Adyah Solar Energy Pvt Ltd | 300 |
| M/s. Azure Power Earth Pvt Ltd | 100 |
| M/s. Avaada Solar Energy Pvt Ltd | 150 |
| M/s. Tata Power Renewable Energy Ltd | 250 |
| M/s. Fortum Solar India Private Ltd | 250 |
| M/s. Avaada Solarise Energy Pvt Limited | 150 |
| M/s. SBG Cleantech Projectco Five Pvt Ltd | 200 |
| KREDL | 50 |

ಸದರಿ ಖಾಸಗಿ ಸಂಸ್ಥೆಗಳೇ ಯೋಜನಾ ವೆಚ್ಚವನ್ನು ಭರಿಸಿರುತ್ತಾರೆ.

**ಈ)** ಈ ಸೋಲಾರ್ ಪಾರ್ಕ್‌ನಲ್ಲಿ ಉತ್ಪಾದಿಸಲ್ಪಡುವ ವಿದ್ಯುತ್‌ನ್ನು ಯಾವ ದರದಲ್ಲಿ ಖರೀದಿ ಮಾಡಲಾಗುತ್ತಿದೆ ಮತ್ತು ಈ ವಿದ್ಯುತ್ ಉತ್ಪಾದಕ ಸಂಸ್ಥೆಗಳೊಂದಿಗೆ ಎಷ್ಟು ವರ್ಷಕ್ಕೆ ಕರಾರು ಮಾಡಿಕೊಳ್ಳಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು)

ಈ ಸೋಲಾರ್ ಪಾರ್ಕಿನಲ್ಲಿ ಉತ್ಪಾದಿಸಲ್ಪಡುವ 1850ಮೆ.ವ್ಯಾ. ಸಾಮರ್ಥ್ಯದ ವಿದ್ಯುತ್ತನ್ನು ಕರ್ನಾಟಕ ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳು ಹಾಗೂ ಇನ್ನುಳಿದ 200ಮೆ.ವ್ಯಾ. (M/s. SBG Cleantech Projectco Five Pvt Ltd) ಸಾಮರ್ಥ್ಯವನ್ನು ಉತ್ತರ ಪ್ರದೇಶ ಸರಬರಾಜು ಕಂಪನಿಗಳು ಕೆಳಕಂಡ ದರದಲ್ಲಿ 25 ವರ್ಷಗಳ ಅವಧಿಗೆ ವಿದ್ಯುತ್ ಖರೀದಿ ಒಪ್ಪಂದದನ್ವಯ ಖರೀದಿ ಮಾಡುತ್ತಿದ್ದಾರೆ:

| ಖಾಸಗಿ ಸಂಸ್ಥೆ | ಸಾಮರ್ಥ್ಯ ಮೆ.ವ್ಯಾ. | ಪ್ರತಿ ಯೂನಿಟ್ ಖರೀದಿ ದರ |
|---|---|---|
| M/s. Parampujya Solar Energy Pvt Ltd, | 150 | ಬಂಡಲ್ಡ್ ಟ್ಯಾರಿಫ್ ರೂ.4.22/ಪ್ರತಿ ಯೂನಿಟ್‌ಗೆ |
| M/s. Tata Power Renewable Energy Ltd | 150 | |
| M/s. ACME Rewari Solar Power Pvt Ltd, &<br>M/s. ACME Kurukshetra Solar Energy Pvt Ltd | 50<br>50 | |
| M/s. Fortum FinnSurya Energy Private Ltd | 100 | |
| M/s. ReNew Wind Energy (TN2) Pvt Ltd, | 50 | |
| M/s. Yarrow Infrastructure Ltd | 50 | |
| M/s. Adyah Solar Energy Pvt Ltd | 300 | 2.91 |
| M/s. Azure Power Earth Pvt Ltd | 100 | 2.93 |
| M/s. Avaada Solar Energy Pvt Ltd | 150 | 2.92 |
| M/s. Tata Power Renewable Energy Ltd | 250 | 2.85 |
| M/s. Fortum Solar India Private Ltd | 250 | 2.85 |
| M/s. Avaada Solarise Energy Pvt Limited | 150 | 2.92 |
| M/s. SBG Cleantech Projectco Five Pvt Ltd | 200 | 2.89 |
| KREDL | 50 | 1.24 |

| | | |
|---|---|---|
| ಉ) | ಈ ಸೋಲಾರ್ ಪಾರ್ಕ್‌ನ್ನು ಅಭಿವೃದ್ಧಿಪಡಿಸಿದ ನಂತರ ರಾಜ್ಯದ ರೈತರಿಗೆ ವಿದ್ಯುತ್ ಸರಬರಾಜಿನಲ್ಲಿ ಆಗಿರುವ ಅನುಕೂಲಗಳೇನು ಮತ್ತು ಎಸ್ಕಾಂಗಳ ಮೇಲೆ ಆಗಿರುವ ಪರಿಣಾಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಸೋಲಾರ್ ಪಾರ್ಕ್ ಮತ್ತು ಇತರೆ ಸೋಲಾರ್ ಘಟಕಗಳಿಂದಾಗಿ ರೈತರಿಗೆ ವಿದ್ಯುತ್ ಸರಬರಾಜಿನಲ್ಲಿ ಆಗಿರುವ ಅನುಕೂಲಗಳು ಕೆಳಗಿನಂತಿವೆ.<br>• ಕೃಷಿ ಪಂಪ್‌ಸೆಟ್‌ಗಳಿಗೆ ಹಗಲಿನಲ್ಲಿಯೇ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br>• ವಿದ್ಯುತ್ ಕಡಿತ ಮತ್ತು ವಿದ್ಯುತ್ ಸರಬರಾಜಿನಲ್ಲಿ ಆಗುವ ಅಡಚಣೆಗಳು ಕಡಿಮೆಯಾಗಿವೆ.<br>• ಕೃಷಿ ಪಂಪ್‌ಸೆಟ್‌ಗಳಿಗೆ ಹಗಲಿನಲ್ಲಿಯೇ ವಿದ್ಯುತ್ ಸರಬರಾಜು ಮಾಡುತ್ತಿರುವುದರಿಂದ ಸಂಜೆ ಮತ್ತು ಬೆಳಗಿನ ಪೀಕ್ ಲೋಡ್ ಕಡಿಮೆಯಾಗಿದೆ.<br>• ವಿದ್ಯುತ್ ಕೊರತೆಯ ಸಮಯದಲ್ಲಿ ಅಲ್ಪಾವಧಿ ಮತ್ತು ಅಧಿಕ ಬೆಲೆಯ ವಿದ್ಯುತ್ ನ್ನು ಖರೀದಿಸುವ ಅವಶ್ಯಕತೆಯಿರುವುದಿಲ್ಲ. |

**ಸಂಖ್ಯೆ: ಎನರ್ಜಿ 41 ಪಿಪಿಎಂ 2021**

ಬಿ.ಎಸ್. ಯಡಿಯೂರಪ್ಪ

**(ಬಿ.ಎಸ್.ಯಡಿಯೂರಪ್ಪ)**

ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1284
2. ಸದಸ್ಯರ ಹೆಸರು : ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ)
3. ಉತ್ತರಿಸಬೇಕಾದ ದಿನಾಂಕ : 09.03.2021

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಜಮಖಂಡಿ ಮತಕ್ಷೇತ್ರದ ಗಲಗಲಿ-ಮರೆಗುದ್ದಿ ಏತ ನೀರಾವರಿ ಯೋಜನೆಯು ಯಾವ ಹಂತದಲ್ಲಿದೆ; | ಜಮಖಂಡಿ ಮತಕ್ಷೇತ್ರದ ಗಲಗಲಿ-ಮರೆಗುದ್ದಿ ಏತ ನೀರಾವರಿ ಯೋಜನೆಗೆ 2018-19 ನೇ ಸಾಲಿನ ಆಯವ್ಯಯದಲ್ಲಿ ರೂ.100.00 ಕೋಟಿಗಳಿಗೆ ಘೋಷಣೆ ಮಾಡಲಾಗಿರುತ್ತದೆ. ಸದರಿ ಯೋಜನೆಯ ವಿವರವಾದ ಯೋಜನಾ ವರದಿಯನ್ನು ತಯಾರಿಸಲು ಸರ್ವೆ ಕನ್ಸಲ್ಟೆನ್ಸಿ ವಹಿಸಲಾಗಿರುತ್ತದೆ. ಯೋಜನೆ ಕುರಿತು ನೀರಿನ ಲಭ್ಯತೆ ಹಾಗೂ ಹಂಚಿಕೆ ಬಗ್ಗೆ ನಿಗಮದ ಹಂತದಲ್ಲಿ ಪರಿಶೀಲನೆಯಲ್ಲಿದೆ. |
| ಆ) | ಸದರಿ ಯೋಜನೆಗೆ 2018-19ನೇ ಸಾಲಿನ ಆಯವ್ಯಯದಲ್ಲಿ 100 ಕೋಟಿ ಮೀಸಲಿಟ್ಟಿದ್ದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಸದರಿ ಯೋಜನೆಗೆ 216.50 ಕೋಟಿಗಳಿಗೆ ಅಂದಾಜು ಪ್ರತಿಯನ್ನು ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಸರ್ಕಾರಕ್ಕೆ ಸಲ್ಲಿಸಿದ್ದು ಸದರಿ ಯೋಜನೆಯ ಕಾಮಗಾರಿಯನ್ನು ಯಾವಾಗ ಪ್ರಾರಂಭ ಮಾಡಿ ಯಾವಾಗ ಮುಕ್ತಾಯಗೊಳಿಸಲಾಗುವುದು? | |

**ಸಂಖ್ಯೆ: ಜಸಂಇ 24 ಡಬ್ಲ್ಯೂಎಲ್ಎ 2021**

(ಬಿ.ಎಸ್ ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1236
2. ಸದಸ್ಯರ ಹೆಸರು : ಶ್ರೀ ಕೆ. ಎಸ್. ಲಿಂಗೇಶ್
3. ಉತ್ತರಿಸಬೇಕಾದ ದಿನಾಂಕ : 09-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಹಾಸನ ಜಿಲ್ಲೆಯಲ್ಲಿ ಉಪ ವಿಭಾಗಾಧಿಕಾರಿಗಳ ಕಛೇರಿ, ಭೂಸ್ವಾಧೀನಾಧಿಕಾರಿಗಳ ಕಛೇರಿ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಯಲ್ಲಿ ಕಾವೇರಿ ನೀರಾವರಿ ನಿಗಮದ ವ್ಯಾಪ್ತಿಗೆ ಬರುವ ನೀರಾವರಿ ಯೋಜನೆಗಳ ಉದ್ದೇಶಕ್ಕಾಗಿ ಎಷ್ಟು ಜಮೀನುಗಳನ್ನು ಭೂಸ್ವಾಧೀನ ಪಡಿಸಿಕೊಳ್ಳಲಾಗಿದೆ (ಸಂಪೂರ್ಣ ಮಾಹಿತಿ ನೀಡುವುದು). | ಹಾಸನ ಜಿಲ್ಲೆಯಲ್ಲಿ ಕಾವೇರಿ ನೀರಾವರಿ ನಿಗಮದ ವ್ಯಾಪ್ತಿಗೆ ಬರುವ ನೀರಾವರಿ ಯೋಜನೆಗಳ ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಂಡ ಜಮೀನುಗಳ ವಿವರ ಕೆಳಕಂಡಂತಿದೆ : |

| ಯೋಜನೆ | ಭೂಸ್ವಾಧೀನ ಪಡಿಸಿಕೊಂಡಿರುವ ಜಮೀನಿನ ವಿಸ್ತೀರ್ಣ |
|---|---|
| ಹೇಮಾವತಿ | 77,578.06 ಎಕರೆ |
| ಯಗಚಿ | 5,428.02 ಎಕರೆ |
| ಹಾರಂಗಿ | 966.00 ಎಕರೆ |
| ವಾಟೆಹೊಳೆ | 770.65 ಎಕರೆ |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಆ | ಈ ಕಛೇರಿಗಳಲ್ಲಿ ಭೂಸ್ವಾಧೀನ ಪಡಿಸಿಕೊಂಡ ಜಮೀನುಗಳಿಗೆ ಪರಿಹಾರವನ್ನು ಪಡೆದಿರುವ ಪ್ರಕರಣಗಳೆಷ್ಟು ಹಾಗೂ ಎಷ್ಟು ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯದಲ್ಲಿ ಹೆಚ್ಚಿನ ಪರಿಹಾರ ಕೋರಿ ದಾವೆ ಹೂಡಲಾಗಿದೆ. (ಸಂಪೂರ್ಣ ಮಾಹಿತಿ ನೀಡುವುದು). | ಭೂಸ್ವಾಧೀನ ಪಡಿಸಿಕೊಂಡ ಜಮೀನುಗಳಿಗೆ ಪರಿಹಾರ ಪಡೆದಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ : |

| ಯೋಜನೆ | ಭೂಪರಿಹಾರ ಪಡೆದಿರುವ ಪ್ರಕರಣಗಳ ಸಂಖ್ಯೆ |
|---|---|
| ಹೇಮಾವತಿ | 2,536 |
| ಯಗಚಿ | 1,059 |
| ಹಾರಂಗಿ | 387 |
| ವಾಟೆಹೊಳೆ | 224 |
| **ಒಟ್ಟು :-** | **4,206** |

ಹಾಸನ ಜಿಲ್ಲೆಯ ವಿವಿಧ ನ್ಯಾಯಾಲಯದಲ್ಲಿ ಒಟ್ಟು 1,243 ಪ್ರಕರಣಗಳಲ್ಲಿ ಹೆಚ್ಚಿನ ಪರಿಹಾರ ಕೋರಿ ದಾವೆ ಹೂಡಲಾಗಿದೆ.

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಇ | ಈ ಪ್ರಕರಣಗಳ ಪೈಕಿ ಎಷ್ಟು ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯಗಳು ಉಪವಿಭಾಗಾಧಿಕಾರಿಗಳ ಕಛೇರಿ, ಭೂಸ್ವಾಧೀನಾಧಿಕಾರಿಗಳ ಕಛೇರಿ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಗಳಲ್ಲಿ ಸರ್ಕಾರಿ ವಕೀಲರುಗಳು ಭೂ ಮಾಲೀಕರೊಂದಿಗೆ ಶಾಮೀಲಾಗಿ ನಿಗದಿಪಡಿಸಿದ ಪರಿಹಾರಕ್ಕಿಂತ 10 ರಿಂದ 100 ಪಟ್ಟಿಗೂ ಹೆಚ್ಚಿನ ಪರಿಹಾರವನ್ನು ವಿವಿಧ ನ್ಯಾಯಾಲಯಗಳಲ್ಲಿ ನಿಗದಿಗೊಳಿಸಿ ಆದೇಶ ಹೊರಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ? | ಭೂಸ್ವಾಧೀನಕಾಯ್ದೆ ಕಲಂ 18(1) ರಂತೆ ದಾಖಲಿಸಿದ ಎಲ್.ಎ.ಸಿ. ಪ್ರಕರಣಗಳಲ್ಲಿ ಹೆಚ್ಚಿನ ಪರಿಹಾರ ನಿಗದಿಗೊಳಿಸಿ ನ್ಯಾಯಾಲಯ ಆದೇಶಿಸಿರುವ ಪ್ರಕರಣಗಳಲ್ಲಿ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗಿರುವುದನ್ನು ಗಮನಿಸಿ, ಮೇಲ್ಮನವಿ ಸಲ್ಲಿಸುವ ಬಗ್ಗೆ ನಿಗಮದ ವಕೀಲರಿಂದ ಕಾನೂನು ಅಭಿಪ್ರಾಯ ಪಡೆದು, ಅದರಂತೆ ಪ್ರಸ್ತುತ 300 ಕ್ಕೂ ಹೆಚ್ಚು ಪ್ರಕರಣಗಳಲ್ಲಿ ಮೇಲ್ಮನವಿ ಸಲ್ಲಿಸಲಾಗಿರುತ್ತದೆ. ನ್ಯಾಯಾಲಯದಿಂದ ಹೆಚ್ಚುವರಿ ಪರಿಹಾರ ನಿಗದಿಪಡಿಸಲಾಗಿದ್ದ ಇನ್ನೂ ಹಲವಾರು ಪ್ರಕರಣಗಳನ್ನು ಗುರುತಿಸಲಾಗಿದ್ದು, ಮೇಲ್ಮನವಿ ಸಲ್ಲಿಸಲು ನಿಗಮದ ವತಿಯಿಂದ ದಾಖಲೆಗಳನ್ನು ಕ್ರೋಢೀಕರಿಸಲಾಗುತ್ತಿದೆ. |

*ಸಂಖ್ಯೆ:ಜಸಂಇ 44 ಎನ್‌ಎಲ್‌ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1286
ಸದಸ್ಯರ ಹೆಸರು : ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ)
ಉತ್ತರಿಸುವ ದಿನಾಂಕ : 09.03.2021

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಜಮಖಂಡಿ ಮತಕ್ಷೇತ್ರದ ಕೂರ್ಪಾಲಿ ಗ್ರಾಮದ ನರಸಿಂಹ ದೇವಸ್ಥಾನಕ್ಕೆ ಅಡ್ಡಲಾಗಿ ಕೃಷ್ಣಾ ನದಿಯಲ್ಲಿ ತಡೆಗೋಡೆ ನಿರ್ಮಾಣ ಮಾಡಿರುವ ಮಾದರಿಯಂತೆ ಸದರಿ ಮತಕ್ಷೇತ್ರದ ಕಡಕೋಳ ಗ್ರಾಮದ ಕೃಷ್ಣಾ ನದಿಯಲ್ಲಿರುವ ಹೆಬ್ಬಿ ಬಸವೇಶ್ವರ ದೇವಸ್ಥಾನಕ್ಕೆ ತಡೆಗೋಡೆ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಕಡಕೋಳ ಗ್ರಾಮ ಕೃಷ್ಣಾ ನದಿಯಲ್ಲಿರುವ ಹೆಬ್ಬಿ ಬಸವೇಶ್ವರ ದೇವಸ್ಥಾನಕ್ಕೆ ತಡೆಗೋಡೆ ನಿರ್ಮಾಣ ಮಾಡುವ ಬಗ್ಗೆ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಆ) | ಹಾಗಿದ್ದಲ್ಲಿ ಈ ತಡೆಗೋಡೆ ನಿರ್ಮಾಣ ಮಾಡಲು ತಗಲುವ ಅಂದಾಜು ವೆಚ್ಚ ಎಷ್ಟು? | |

ಸಂಖ್ಯೆ: ಜಸಂಇ 21 ಡಬ್ಲ್ಯೂಬಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1264
2. ಸದಸ್ಯರ ಹೆಸರು : ಶ್ರೀ ಅನಿಲ್ ಚಿಕ್ಕಮಾದು
3. ಉತ್ತರಿಸಬೇಕಾದ ದಿನಾಂಕ : 09-03-2021

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ತಾಲ್ಲೂಕಿನ ಕಬಿನಿ ಜಲಾಶಯದ ಬಳಿ ಕೆ.ಆರ್.ಎಸ್ ಉದ್ಯಾನವನ ಮಾದರಿಯಲ್ಲಿ ಉದ್ಯಾನವನ ನಿರ್ಮಿಸುವ ಪ್ರಸ್ಥಾವನೆಯು ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಪ್ರಸ್ತಾವನೆಯು ಯಾವ ಹಂತದಲ್ಲಿದೆ; ಈ ಬಗ್ಗೆ ಸರ್ಕಾರದ ನಿಲುವೇನು; (ಸಂಪೂರ್ಣ ವಿವರ ನೀಡುವುದು) | ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ತಾಲ್ಲೂಕಿನ ಕಬಿನಿ ಜಲಾಶಯದ ಕೆಳಭಾಗದಲ್ಲಿ ಸುಮಾರು 50 ಎಕರೆ ಪ್ರದೇಶದಲ್ಲಿ ರೂ.50.00 ಕೋಟಿಗಳ ಅಂದಾಜು ಮೊತ್ತದಲ್ಲಿ ಉದ್ಯಾನವನ ನಿರ್ಮಾಣಕ್ಕೆ ವಿಸ್ತೃತವಾದ ಸಮೀಕ್ಷೆ, ವಿನ್ಯಾಸ ಹಾಗೂ ಯೋಜನಾ ವರದಿಯನ್ನು ಸಿದ್ಧಪಡಿಸಲು ಕಾವೇರಿ ನೀರಾವರಿ ನಿಗಮದಿಂದ ಕ್ರಮ ಕೈಗೊಳ್ಳಲಾಗುತ್ತಿದೆ. ಪ್ರಸ್ತಾವನೆ ಸ್ವೀಕೃತವಾದ ನಂತರ ಪರಿಶೀಲಿಸಿ ಮುಂದಿನ ಅಗತ್ಯ ಕ್ರಮ ಕೈಗೊಳ್ಳಲಾಗುವುದು. |
| ಆ | ಸದರಿ ಉದ್ಯಾನವನ ನಿರ್ಮಿಸಲು 2021-22ನೇ ಸಾಲಿನ ಆಯವ್ಯಯದಲ್ಲಿ ಅನುದಾನ ಮೀಸಲಿಡಲು ಸರ್ಕಾರ ಕ್ರಮ ಕೈಗೊಳ್ಳುವುದೇ; ಇಲ್ಲವಾದಲ್ಲಿ, ಯಾವಾಗ ಅನುದಾನ ಮಂಜೂರು ಮಾಡಿ ಉದ್ಯಾನವನ ನಿರ್ಮಿಸುವ ಕಾಮಗಾರಿ ಪ್ರಾರಂಭಿಸಲಾಗುವುದು; (ವಿವರ ನೀಡುವುದು) | |
| ಇ | ಉದ್ದೇಶಿತ ಉದ್ಯಾನವನವನ್ನು ಎಷ್ಟು ವಿಸ್ತೀರ್ಣದಲ್ಲಿ ನಿರ್ಮಾಣ ಮಾಡಲಾಗುವುದು; ಈ ಉದ್ಯಾನವನ ನಿರ್ಮಿಸುವ ಸಂಪೂರ್ಣ ಯೋಜನೆಗೆ ತಗಲಬಹುದಾದ ಅಂದಾಜು ವೆಚ್ಚವೆಷ್ಟು? (ಸಂಪೂರ್ಣ ವಿವರ ನೀಡುವುದು) | |

*ಸಂಖ್ಯೆ:ಜಸಂಇ 39 ಎನ್ಎಲ್ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1252
2. ಸದಸ್ಯರ ಹೆಸರು : ಶ್ರೀ ರವೀಂದ್ರ ಶ್ರೀಕಂಠಯ್ಯ
3. ಉತ್ತರಿಸಬೇಕಾದ ದಿನಾಂಕ : 09-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಶ್ರೀರಂಗಪಟ್ಟಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಕೆ.ಆರ್.ಎಸ್ ವಿಭಾಗ, ವಿ.ಸಿ. ನಾಲಾ ವಿಭಾಗ, ಡಿ.ಐ. ವಿಭಾಗ ಬನ್ನೂರು ವಿಭಾಗಗಳಿಗೆ ಸಂಬಂಧಿಸಿದಂತೆ ಸಮರ್ಪಕ ನೀರು ನಿರ್ವಹಣೆಗೆ ದುಸ್ಥಿತಿಯಲ್ಲಿರುವ ನಾಲೆಗಳ ಅಭಿವೃದ್ಧಿಗೆ ತಡೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶ್ರೀರಂಗಪಟ್ಟಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಕೆ.ಆರ್.ಎಸ್ ವಿಭಾಗ, ವಿ.ಸಿ. ನಾಲಾ ವಿಭಾಗ, ಡಿ.ಐ. ವಿಭಾಗ ಬನ್ನೂರು ವಿಭಾಗಗಳಿಗೆ ಸಂಬಂಧಿಸಿದಂತೆ ಅಗತ್ಯತೆಗೆ ಅನುಗುಣವಾಗಿ ತುರ್ತು ನಿರ್ವಹಣಾ ಕಾಮಗಾರಿಗಳನ್ನು ಆಯಾ ಆರ್ಥಿಕ ವರ್ಷದಲ್ಲೇ ಕೈಗೊಂಡು, ನಾಲೆಗಳ ಅಚ್ಚುಕಟ್ಟು ಪ್ರದೇಶಕ್ಕೆ ಸಮರ್ಪಕವಾಗಿ ನೀರು ನಿರ್ವಹಣೆ ಮಾಡಲಾಗುತ್ತಿದೆ.<br><br>ಮುಂದುವರೆದು, ದಿನಾಂಕ:20-09-2019 ರಂದು ನಡೆದ ಕಾವೇರಿ ನೀರಾವರಿ ನಿಗಮದ ಮಂಡಳಿಯ 70ನೇ ಸಭೆಯ ನಿರ್ಣಯದಂತೆ ಇನ್ನೂ ಅನುಷ್ಠಾನಗೊಳ್ಳದ ವಿವಿಧ ಪ್ರಕ್ರಿಯೆಯಲ್ಲಿರುವ ಹೊಸ ಕಾಮಗಾರಿಗಳನ್ನು ಆಡಳಿತಾತ್ಮಕ ಹಾಗೂ ಆರ್ಥಿಕ ಮಿತವ್ಯಯತೆಯನ್ನು ಕಾಯ್ದುಕೊಳ್ಳುವ ಹಿತದೃಷ್ಟಿಯಿಂದ ಕೈಬಿಡಲಾಗಿದ್ದು, ಪ್ರಸ್ತಕ ಸಾಲಿನ ಮುಂದುವರೆದ ಕಾಮಗಾರಿಗಳನ್ನು ಮಾತ್ರ ಕೈಗೊಳ್ಳಲಾಗುತ್ತಿದೆ.<br><br>ಪ್ರಸಕ್ತ ಆರ್ಥಿಕ ವರ್ಷದಲ್ಲಿ ನಿಗಮದ ಕಾರ್ಯಭಾರ ಅಧಿಕವಾಗಿರುವುದರಿಂದ ಸದರಿ ಅನುಷ್ಠಾನಗೊಳ್ಳದೇ ಇರುವ ಕಾಮಗಾರಿಗಳನ್ನು ಮುಂಬರುವ ಆರ್ಥಿಕ ವರ್ಷದಲ್ಲಿ ಅನುದಾನದ ಲಭ್ಯತೆಗನುಸಾರವಾಗಿ ಕೈಗೊಳ್ಳುವ ಕುರಿತು ಪರಿಶೀಲಿಸಲಾಗುವುದು. |
| ಆ | ಇದರಿಂದ ಸಾರ್ವಜನಿಕರಿಗೆ ತೊಂದರೆಯಾಗಿದ್ದರೂ ಸರ್ಕಾರ ಗಮನ ಹರಿಸಿ ತಡೆ ತೆರವು ಮಾಡಲು ಕ್ರಮ ಕೈಗೊಳ್ಳದಿರಲು ಕಾರಣಗಳೇನು; | |
| ಇ | ಈಗಾಗಲೇ ಕಾವೇರಿ ನೀರಾವರಿ ನಿಗಮದಿಂದ ಅನುಮೋದನೆಯಾಗಿರುವ ಕಾಮಗಾರಿಗಳಿಗೆ ಚಾಲನೆ ನೀಡಲು ಸರ್ಕಾರ ಕ್ರಮ ಕೈಗೊಂಡಿದೆಯೇ; | |
| ಈ | ಈ ಬಗ್ಗೆ ಕೈಗೊಂಡ ಕ್ರಮಗಳೇನು? | |

*ಸಂಖ್ಯೆ:ಜಸಂಇ 40 ಎನ್‌ಎಲ್‌ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1255
2. ಸದಸ್ಯರ ಹೆಸರು : ಶ್ರೀ ಹೆಚ್.ಡಿ.ರೇವಣ್ಣ
3. ಉತ್ತರಿಸಬೇಕಾದ ದಿನಾಂಕ : 09-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಹಾಸನ ಜಿಲ್ಲೆ, ಹಾಸನ ನಗರದಲ್ಲಿ Integrated master plan ರ ಪ್ರಕಾರ ಹಾಸನ ನಗರದ ಚನ್ನಪಟ್ಟಣ ಕೆರೆಯ ಅಂಗಳದಲ್ಲಿ ಕೈಗೊಳ್ಳಲು ಉದ್ದೇಶಿಸಲಾಗಿರುವ ವಿಹಾರಧಾಮದ ಅಭಿವೃದ್ಧಿ ಮತ್ತು ಉದ್ಯಾನವನ ನಿರ್ಮಾಣ ಹಾಗೂ ಮಳೆಗಾಲದಲ್ಲಿ ಮಳೆ ನೀರು ಮತ್ತು ಕೊಳಚೆ ನೀರು ಹೊರಹಾಕುವ ಯೋಜನೆ, ಮುಂತಾದ ಕಾಮಗಾರಿಗಳ ವಿವರವಾದ ಯೋಜನೆಗಳಿಗೆ ರೂ.144.00 ಕೋಟಿ ಅಂದಾಜು ಮೊತ್ತದಲ್ಲಿ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | • ಹಾಸನ ಜಿಲ್ಲೆಯ ಹಾಸನ ನಗರದ ಚನ್ನಪಟ್ಟಣ ಕೆರೆಯ ಅಂಗಳದಲ್ಲಿ ವಿಹಾರಧಾಮದ ಅಭಿವೃದ್ಧಿ ಮತ್ತು ಉದ್ಯಾನವನ ನಿರ್ಮಾಣ ಕಾಮಗಾರಿಯ ವಿವರವಾದ ಯೋಜನಾ ವರದಿಗೆ ಸರ್ಕಾರದ ದಿನಾಂಕ:24-07-2019 ರ ಆದೇಶದಲ್ಲಿ ರೂ.144.00 ಕೋಟಿಗಳ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, 2019-20ನೇ ಸಾಲಿನಲ್ಲಿ ಕಾಮಗಾರಿಯ ವೆಚ್ಚವನ್ನು ರೂ.36.00 ಕೋಟಿಗಳಿಗೆ ಸೀಮಿತಗೊಳಿಸಿಕೊಂಡು ಉಳಿಕೆ ಮೊತ್ತವಾದ ರೂ.108.00 ಕೋಟಿಗಳನ್ನು 2020-21ನೇ ಸಾಲಿನಲ್ಲಿ ಕಾವೇರಿ ನೀರಾವರಿ ನಿಗಮಕ್ಕೆ ಹಂಚಿಕೆಯಾಗುವ ಅನುದಾನದಲ್ಲಿ ಭರಿಸಿಕೊಳ್ಳಲು ಸೂಚಿಸಿ ಅನುಮೋದನೆ ನೀಡಲಾಗಿರುತ್ತದೆ.<br>• ನಂತರ ಹಾಸನ ವಿಧಾನ ಸಭಾಕ್ಷೇತ್ರದ ಶಾಸಕರು ಮಾನ್ಯ ಮುಖ್ಯಮಂತ್ರಿಯವರಿಗೆ ಮನವಿಯನ್ನು ಸಲ್ಲಿಸಿ, ಈಗಾಗಲೇ ತಯಾರಿಸಿರುವ ಹಾಸನ ನಗರದ ಚನ್ನಪಟ್ಟಣ ಕೆರೆಯ ಅಂಗಳದಲ್ಲಿ ವಿಹಾರಧಾಮದ ಅಭಿವೃದ್ಧಿ ಮತ್ತು ಉದ್ಯಾನವನ ನಿರ್ಮಾಣ ಕಾಮಗಾರಿಗಳಲ್ಲಿನ ಚನ್ನಪಟ್ಟಣ ಕೆರೆಯಲ್ಲಿನ ಕೆಲವು ಅವಶ್ಯಕ ಅಂಶಗಳನ್ನು ಉಳಿಸಿಕೊಂಡು ಅದರ ಜೊತೆಗೆ ಹಾಸನ ನಗರದ ಸ್ಥಳೀಯ ನಾಗರೀಕರ ಕೋರಿಕೆಯಂತೆ ಹಾಸನ ನಗರದಲ್ಲಿನ 06 ಕೆರೆಗಳು ಮತ್ತು 09 ಉದ್ಯಾನವನಗಳು ಮತ್ತು ಇತರೆ ಮೂಲಭೂತ ಸೌಕರ್ಯ ಕಾಮಗಾರಿಗಳನ್ನು ಅಳವಡಿಸಿಕೊಂಡು ಮಾರ್ಪಡಿತ ಯೋಜನೆಯನ್ನು ಅನುಷ್ಠಾನಗೊಳಿಸಲು ಕೋರಿಕೊಂಡಿದ್ದ ಹಿನ್ನೆಲೆಯಲ್ಲಿ, ದಿನಾಂಕ:03-10-2019 ರ ಸರ್ಕಾರದ ಪತ್ರದಲ್ಲಿ ಹಾಸನ ಕ್ಷೇತ್ರದ ಶಾಸಕರ ಮನವಿಯಂತೆ ಪ್ರಸ್ತಾವನೆಯನ್ನು ಪರಿಷ್ಕರಿಸುವ ಬಗ್ಗೆ ಸೂಕ್ತ ಕ್ರಮ ವಹಿಸುವಂತೆ ಸೂಚಿಸಲಾಗಿತ್ತು.<br>• ಈ ಹಿನ್ನೆಲೆಯಲ್ಲಿ ಸರ್ಕಾರದಿಂದ ಅನುಮೋದನೆಯಾಗಿದ್ದ ಮೂಲ ಯೋಜನೆಯಲ್ಲಿನ ಚನ್ನಪಟ್ಟಣ ಕೆರೆಗೆ ಸಂಬಂಧಿಸಿದ ಕೆಲವು ಅವಶ್ಯಕ ಅಂಶಗಳನ್ನು ಉಳಿಸಿಕೊಂಡು ಇದರ ಜೊತೆಗೆ ಹಾಸನ ನಗರದ ಸ್ಥಳೀಯ ನಾಗರೀಕರ ಕೋರಿಕೆಯಂತೆ ಹಾಸನ ನಗರದ 06 ಕೆರೆಗಳು ಮತ್ತು 09 ಉದ್ಯಾನವನಗಳು ಮತ್ತು ಇತರೆ ಮೂಲಭೂತ ಸೌಕರ್ಯ ಕಾಮಗಾರಿಗಳನ್ನು ಅಳವಡಿಸಿಕೊಂಡು ತಯಾರಿಸಲಾದ ರೂ.144.00 ಕೋಟಿಗಳ ಮೊತ್ತದ ಮಾರ್ಪಡಿತ ಯೋಜನಾ ವರದಿಯನ್ನು ದಿನಾಂಕ:05-10-2020 ರಂದು ನಡೆದ ಕಾವೇರಿ ನೀರಾವರಿ ನಿಗಮದ ಮಂಡಳಿಯ 72ನೆಯ ಸಭೆಯಲ್ಲಿ ಅನುಮೋದಿಸಲಾಗಿದ್ದು, ಅದರಂತೆ ದಿನಾಂಕ:27-11-2020 ರಂದು ಮಾರ್ಪಡಿತ ಯೋಜನಾ ವರದಿಯ ಕಾಮಗಾರಿಯ ಟೆಂಡರ್‌ನ್ನು ಆಹ್ವಾನಿಸಲಾಗಿದ್ದು, ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ. |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಆ | ಮಾಜಿ ಮುಖ್ಯಮಂತ್ರಿಗಳು ಹಾಗೂ ಜೆ.ಡಿ.ಎಸ್. ಪಕ್ಷದ ಶಾಸಕಾಂಗ ಪಕ್ಷದ ನಾಯಕರು ದಿನಾಂಕ:23-09-2020 ರಂದು ಮಾನ್ಯ ಮುಖ್ಯಮಂತ್ರಿಯವರಿಗೆ ಪತ್ರ ಬರೆದಿದ್ದು, ಈ ಪತ್ರದ ಮೇಲೆ "Integrated master plan ರ ಪ್ರಕಾರ ಮುಂದುವರೆಸುವುದು" ಎಂದು ಆರ್ಥಿಕ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಯವರಿಗೆ ನಿರ್ದೇಶನ ನೀಡಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಮಾಜಿ ಮುಖ್ಯಮಂತ್ರಿಗಳು ಹಾಗೂ ಜೆ.ಡಿ.ಎಸ್. ಪಕ್ಷದ ಶಾಸಕಾಂಗ ಪಕ್ಷದ ನಾಯಕರು ದಿನಾಂಕ:23-09-2020 ರಂದು ಮಾನ್ಯ ಮುಖ್ಯಮಂತ್ರಿಯವರಿಗೆ ಪತ್ರ ಬರೆದಿದ್ದು, ಸದರಿ ಪತ್ರದ ಮೇಲೆ ಮಾನ್ಯ ಮುಖ್ಯಮಂತ್ರಿಯವರು "ಅ.ಮು.ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ: Integrated master plan ರ ಪ್ರಕಾರ ಮುಂದುವರೆಸುವುದು" ಎಂದು ಷರಾ ನಮೂದಿಸಿರುತ್ತಾರೆ. |
| ಇ | ದಿನಾಂಕ:24-01-2021 ರಂದು ಮಾಜಿ ಪ್ರಧಾನ ಮಂತ್ರಿಗಳು ಹಾಗೂ ರಾಜ್ಯಸಭಾ ಸದಸ್ಯರು ಸುದ್ದಿಗೋಷ್ಠಿ ನಡೆಸಿ ಹಾಸನ ಜಿಲ್ಲೆ, ಹಾಸನ ನಗರದಲ್ಲಿ Integrated Master plan ರ ಪ್ರಕಾರ ಹಾಸನ ನಗರದ ಚನ್ನಪಟ್ಟಣ ಕೆರೆಯ ಅಂಗಳದಲ್ಲಿ ಕೈಗೊಳ್ಳಲು ಉದ್ದೇಶಿಸಲಾಗಿರುವ ವಿಹಾರಧಾಮದ ಅಭಿವೃದ್ಧಿ ಮತ್ತು ಉದ್ಯಾನವನ ನಿರ್ಮಾಣ ಹಾಗೂ ಮಳೆಗಾಲದಲ್ಲಿ ಮಳೆನೀರು ಮತ್ತು ಕೊಳಚೆ ನೀರು ಹೊರಹಾಕುವ ಯೋಜನೆ, ಮುಂತಾದ ಕಾಮಗಾರಿಗಳ ವಿವರವಾದ ಯೋಜನೆಗಳಿಗೆ ರೂ.144.00 ಕೋಟಿ ಅಂದಾಜು ಮೊತ್ತದಲ್ಲಿ ಕೈಗೊಳ್ಳುವಂತೆ ಆಗ್ರಹಿಸಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಮಾನ್ಯ ಮಾಜಿ ಪ್ರಧಾನ ಮಂತ್ರಿಗಳು ಹಾಗೂ ರಾಜ್ಯಸಭಾ ಸದಸ್ಯರು ದಿನಾಂಕ:24-01-2021 ರಂದು ನಡೆಸಿರುವ ಸುದ್ದಿಗೋಷ್ಠಿಯಲ್ಲಿ ಚನ್ನಪಟ್ಟಣ ಕೆರೆ ಆಧುನಿಕವಾಗಿ ಅಭಿವೃದ್ಧಿ ಮಾಡಲು ತಯಾರಿಸಲಾದ ಮಾಸ್ಟರ್ ಪ್ಲಾನ್ ಪ್ರಕಾರ ಕಾಮಗಾರಿಯನ್ನು ತೆಗೆದುಕೊಳ್ಳಲು ಆಗ್ರಹಿಸಿರುತ್ತಾರೆ. |
| ಈ | ಕಾಮಗಾರಿಗೆ ಸಂಬಂಧಿಸಿದ ಪ್ರಸ್ತಾವನೆಯನ್ನು ಜಲಸಂಪನ್ಮೂಲ ಇಲಾಖೆಯಿಂದ ಆರ್ಥಿಕ ಇಲಾಖೆಗೆ ಕಳುಹಿಸಿರುವುದು ನಿಜವೇ; | ಸದರಿ ಕಾಮಗಾರಿಯನ್ನು ರೂ.36.00 ಕೋಟಿಗಳಿಗೆ ಸೀಮಿತಗೊಳಿಸುವ ಬದಲಾಗಿ ರೂ.144.00 ಕೋಟಿಗಳಿಗೆ ಕೈಗೊಳ್ಳುವ ಹಾಗೂ Integrated Master plan ರ ಪ್ರಕಾರ ಮೂಲ ಯೋಜನಾ ವರದಿಯಂತೆ ಅಥವಾ ನಿಗಮದ ಮಂಡಳಿಯ 72ನೇ ಸಭೆಯಲ್ಲಿ ಅನುಮೋದನೆಗೊಂಡ ಮಾರ್ಪಡಿತ ಯೋಜನಾ ವರದಿಯಂತೆ ಅನುಷ್ಠಾನಗೊಳಿಸುವ ಕುರಿತು ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಿದ್ದು, ಪರಿಶೀಲನೆಯಲ್ಲಿದೆ. |
| ಉ | ಹಾಗಿದ್ದಲ್ಲಿ, ಸದರಿ ಕಾಮಗಾರಿಯನ್ನು ಯಾವ ಕಾಲಮಿತಿಯಲ್ಲಿ ಕೈಗೊಳ್ಳಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | |

*ಸಂಖ್ಯೆ:ಜಸಂಇ 42 ಎನ್‌ಎಲ್‌ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1256
2. ಸದಸ್ಯರ ಹೆಸರು : ಶ್ರೀ ಹೆಚ್.ಡಿ. ರೇವಣ್ಣ
3. ಉತ್ತರಿಸಬೇಕಾದ ದಿನಾಂಕ : 09-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಹಾಸನ ಜಿಲ್ಲೆ ಅರಕಲಗೂಡು ವಿಧಾನ ಸಭಾ ಕ್ಷೇತ್ರ ಮತ್ತು ಹೊಳೆನರಸೀಪುರ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಹೇಮಾವತಿ ಬಲದಂಡೆ ನಾಲಾ ವಿಭಾಗ, ಹೊಳೆನರಸೀಪುರ ಕಾರ್ಯವ್ಯಾಪ್ತಿಯಲ್ಲಿನ ನೀರಾವರಿ ಯೋಜನೆಗೆ ಒಳಪಡುವ (1) Providing feeder canal to supply water from 10th Km of MBC to Kalluguduganahally surrounding tanks coming under the atchkat of Kamasamudra LIS. Rs.249.00 lakhs (2) Construction of CC drain for sub minor under Dy-15 of HRBC and protective works near Paduvalahippe reh. village Rs.90.00 lakhs (3) Construction of road bridge at ch: 7150 m of SRD S(S) canal and construction CC road and drain from Ch: 7150 m to Sri. Panchalingeshwara temple pertaining to Nagalapura reh. village Rs.90.00 Lakhs ಹಾಗೂ (4) Protective wall to Hemavathy river on D/S of Gannikada river bridge near horticultural farm Rs.90.00 lakhs ಅವಶ್ಯಕ ಕಾಮಗಾರಿಗಳು 2018-19ನೇ ಸಾಲಿನ ಕಾರ್ಯಕ್ರಮ ಪಟ್ಟಿಯಲ್ಲಿ ಅನುಮೋದನೆಗೊಂಡು ಮತ್ತು ಟೆಂಡರ್ ಪ್ರಕ್ರಿಯೆಯಲ್ಲಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಹೇಮಾವತಿ ಯೋಜನಾ ವಲಯ, ಗೊರೂರು ವ್ಯಾಪ್ತಿಯಲ್ಲಿನ ಅರಕಲಗೂಡು ವಿಧಾನಸಭಾ ಕ್ಷೇತ್ರ ಮತ್ತು ಹೊಳೆನರಸೀಪುರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಹೇಮಾವತಿ ಬಲದಂಡೆ ನಾಲಾ ವಿಭಾಗ, ಹೊಳೆನರಸೀಪುರ ಕಾರ್ಯವ್ಯಾಪ್ತಿಯಲ್ಲಿ ಬರುವ ಒಟ್ಟಾರೆ ರೂ.519.00 ಲಕ್ಷಗಳ 4 ಸಂಖ್ಯೆಯ ಕಾಮಗಾರಿಗಳು 2018-19ನೇ ಸಾಲಿನ ಕಾರ್ಯಕ್ರಮ ಪಟ್ಟಿಯಲ್ಲಿ ಅನುಮೋದನೆಗೊಂಡಿದ್ದು, ದಿನಾಂಕ:20-09-2019 ರಂದು ನಡೆದ ಕಾವೇರಿ ನೀರಾವರಿ ನಿಗಮದ 70ನೇ ಮಂಡಳಿ ಸಭೆಯ ನಿರ್ಣಯದಂತೆ ಸ್ಥಗಿತಗೊಳಿಸಲಾಗಿರುತ್ತದೆ. |
| ಆ | ಮೇಲ್ಕಂಡ ಕಾಮಗಾರಿಗಳು ಸಾರ್ವಜನಿಕ ಹಿತದೃಷ್ಟಿಯಿಂದ ಅವಶ್ಯಕವಾಗಿರುವುದರಿಂದ ಸಾರ್ವಜನಿಕರ ಹಿತದೃಷ್ಟಿಯಿಂದ ಸದರಿ ಪ್ರಸ್ತಾವನೆಗೆ ಕೂಡಲೇ ಮಂಜೂರಾತಿ ನೀಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಪ್ರಸ್ತಾಪಿತ ರೂ.519.00 ಲಕ್ಷಗಳ ಅಂದಾಜು ಮೊತ್ತದ 4 ಸಂಖ್ಯೆಯ ಕಾಮಗಾರಿಗಳನ್ನು 2020-21ನೇ ಸಾಲಿಗೆ ಕಾವೇರಿ ನೀರಾವರಿ ನಿಗಮಕ್ಕೆ ಹಂಚಿಕೆಯಾಗಿರುವ ಅನುದಾನದ ಮಿತಿಯಲ್ಲಿಯೇ ಅನುಷ್ಠಾನಗೊಳಿಸಲು ಅನುಮೋದನೆ ಕೋರಿ ನಿಗಮದಿಂದ ಸ್ವೀಕೃತವಾಗಿರುವ ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ. |

*ಸಂಖ್ಯೆ:ಜಸಂಇ 43 ಎಸ್ಎಲ್ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1271 |
| ಸದಸ್ಯರ ಹೆಸರು | : | ಶ್ರೀ ಅಶೋಕ್ ನಾಯಕ್ ಕೆ.ಬಿ. (ಶಿವಮೊಗ್ಗ ಗ್ರಾಮಾಂತರ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಶಿವಮೊಗ್ಗ ಗ್ರಾಮಾಂತರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಟ್ರಾನ್ಸ್‌ಫಾರಂಗಳು ಹಾಳಾಗಿದ್ದು, ಇದರ ದುರಸ್ತಿ ಕಾರ್ಯ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಶಿವಮೊಗ್ಗ ಗ್ರಾಮಾಂತರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಟ್ರಾನ್ಸ್ ಫಾರ್ಮರ್ ಗಳನ್ನು ಕಾಲಕಾಲಕ್ಕೆ ನಿರ್ವಹಣೆ ಮಾಡಲಾಗುತ್ತಿದೆ. ಅಧಿಕ ಹೊರೆ ಇರುವ ಟ್ರಾನ್ಸ್ ಫಾರ್ಮರ್ ಗಳ ಹೊರೆ ವಿಭಜನೆ ಮಾಡಿ ಸುಸ್ಥಿತಿಯಲ್ಲಿ ಇರಿಸಲಾಗುತ್ತಿದೆ.<br><br>ವಿಫಲಗೊಂಡ ಪರಿವರ್ತಕಗಳ ದುರಸ್ಥಿಗಾಗಿ ಶಿವಮೊಗ್ಗದಲ್ಲಿ ದುರಸ್ಥಿ ಕೇಂದ್ರವೂ ಕಾರ್ಯ ನಿರ್ವಹಿಸುತ್ತಿದೆ.<br><br>25 ಕೆವಿಎ ಮತ್ತು 100 ಕೆವಿಎ ಟ್ರಾನ್ಸ್ ಫಾರ್ಮರ್ ದುರಸ್ಥಿಯಲ್ಲಿ ಯಾವುದೇ ವಿಳಂಬವಾಗಿರುವುದಿಲ್ಲ.<br><br>63 ಕೆವಿಎ ಸಾಮರ್ಥ್ಯದ ಟ್ರಾನ್ಸ್ ಫಾರ್ಮರ್ ಗಳು ಹೆಚ್ಚಿನ ಸಂಖ್ಯೆಯಲ್ಲಿ ಒಂದೇ ಬಾರಿ ವಿಫಲಗೊಂಡಿದ್ದ ಸಂದರ್ಭದಲ್ಲಿ ಸೂಕ್ತ ಸಮಯಕ್ಕೆ ದುರಸ್ಥಿಗೊಳಿಸಲಾದ ಪರಿವರ್ತಕಗಳು ದಾಸ್ತಾನು ಇಲ್ಲದ ಕಾರಣ ದುರಸ್ಥಿ ಕಾರ್ಯ ನಡೆಸಿ ಪರಿವರ್ತಕಗಳನ್ನು ಅಳವಡಿಸುವಲ್ಲಿ ವಿಳಂಬವಾಗಿರುತ್ತದೆ.<br><br>ಪ್ರಸ್ತುತ, ಅವಶ್ಯಕತೆಗನುಗುಣವಾಗಿ ಸಾಕಷ್ಟು 63 ಕೆವಿಎ ದುರಸ್ಥಿಗೊಳಿಸಲಾದ ಪರಿವರ್ತಕಗಳನ್ನು ಒದಗಿಸಿದ್ದು, ದುರಸ್ಥಿ ಕಾರ್ಯವನ್ನು ಸರಿಯಾದ ಸಮಯದಲ್ಲಿ ಮಾಡಲಾಗುತ್ತಿದೆ. |
| ಆ) | ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | |
| ಇ) | ಈ ಕ್ಷೇತ್ರದ ವ್ಯಾಪ್ತಿಯಲ್ಲಿ ಹೊಸದಾಗಿ ಟ್ರಾನ್ಸ್‌ಫಾರಂಗಳನ್ನು ಅಳವಡಿಸಲು ಇರುವ ಬೇಡಿಕೆಗಳು ಎಷ್ಟು? (ಗ್ರಾಮಾವಾರು ಸಂಪೂರ್ಣ ವಿವರ ನೀಡುವುದು) | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಶಿವಮೊಗ್ಗ ಗ್ರಾಮಾಂತರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಹೊಸದಾಗಿ 87 ಸಂಖ್ಯೆಯ ಟ್ರಾನ್ಸ್‌ಫಾರ್ಮರ್ ಗಳನ್ನು ಅಳವಡಿಸಲು ಪ್ರಸ್ತಾವಿಸಲಾಗಿದೆ. ಗ್ರಾಮವಾರು ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಲಾಗಿದೆ. |

ಸಂಖ್ಯೆ: ಎನರ್ಜಿ 48 ಪಿಪಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1249 |
| ಸದಸ್ಯರ ಹೆಸರು | : | ಶ್ರೀ ಮಂಜುನಾಥ ಆರ್. (ದಾಸರಹಳ್ಳಿ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ದಾಸರಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬೆಸ್ಕಾಂ ವತಿಯಿಂದ Overhead high tension electric ಕೇಬಲ್‌ಗಳನ್ನು HTUG (ಭೂಗತ) ಯಾಗಿ ಪರಿವರ್ತಿಸುತ್ತಿರುವುದರ ಬಗ್ಗೆ ಸರ್ಕಾರಕ್ಕೆ ಮಾಹಿತಿ ಇದೆಯೇ; | ದಾಸರಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವತಿಯಿಂದ Conversion of OHT line to UG/AB cable ಯೋಜನೆಯ ಪಾಕೇಜ್ (3)ರ ಎನ್–5 ಮತ್ತು ಎನ್–7 ಉಪ ವಿಭಾಗಗಳಲ್ಲಿ ಹಾಗೂ ಮಾಡಲ್ ಸಬ್ ಡಿವಿಷನ್ ಅಡಿಯಲ್ಲಿ ಎನ್–4 ಉಪ ವಿಭಾಗಗಳಲ್ಲಿ Overhead high tension electric cable ಗಳನ್ನು HTUG (ಭೂಗತ) ಯಾಗಿ ಪರಿವರ್ತಿಸುತ್ತಿರುವ ಕಾರ್ಯ ಪ್ರಗತಿಯಲ್ಲಿರುತ್ತದೆ. |
| ಆ) | ಬೆಸ್ಕಾಂ ವತಿಯಿಂದ ಹೊರಗುತ್ತಿಗೆ ಪಡೆದು M/s Universal cables Limited ಮತ್ತು M/s Asian Fab Tec Limited ಕಾಮಗಾರಿಯನ್ನು ನಿರ್ವಹಿಸುತ್ತಿದ್ದು ಸುಮಾರು 80 ಕಿ.ಮೀಗಳ ರಸ್ತೆಯನ್ನು ಹಾಳು ಮಾಡಿದ್ದು ಬೆಸ್ಕಾಂ ವತಿಯಿಂದ ಸದರಿ ರಸ್ತೆಗಳ ದುರಸ್ತಿ ಕಾರ್ಯವನ್ನು ಕೈಗೆತ್ತಿಕೊಳ್ಳದಿರಲು ಕಾರಣವೇನು; | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವತಿಯಿಂದ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವೆಬ್‌ಸೈಟ್‌ನಲ್ಲಿ MAARCS ತಂತ್ರಾಂಶದಲ್ಲಿ HDD ಮೂಲಕ ಭೂಗತ ಕೇಬಲ್ ಗಳನ್ನು ಅಳವಡಿಸಲು ಅನುಮತಿಗಾಗಿ ಮನವಿ ಸಲ್ಲಿಸಲಾಗುವುದು. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ಅನುಮತಿ ಬಂದ ನಂತರ, ಬೆಸ್ಕಾಂ ಮತ್ತು ಬಿಬಿಎಂಪಿ ನಡುವಿನ ನಿಬಂಧನೆ ಪ್ರಕಾರ ನಿಗಧಿಪಡಿಸಿರುವ ಅನುಮತಿ ಶುಲ್ಕ ಮತ್ತು ರಸ್ತೆ ದುರಸ್ತಿ ಶುಲ್ಕವನ್ನು ಪಾವತಿಸಿದ ನಂತರ, ಬೆಸ್ಕಾಂ ವತಿಯಿಂದ ಕೇಬಲ್ ಅಳವಡಿಸುವ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗುತ್ತಿದೆ. ಆದುದರಿಂದ ಒಪ್ಪಂದದ ಪ್ರಕಾರ ರಸ್ತೆ ದುರಸ್ತಿಯು ಬಿಬಿಎಂಪಿಯ ವ್ಯಾಪ್ತಿಗೆ ಬರುತ್ತದೆ. |
| ಇ) | HTUG ಕೇಬಲ್‌ಗಳನ್ನು ಅಳವಡಿಸಲು ರಸ್ತೆ ಅಗೆತಕ್ಕೆ ಬಿಬಿಎಂಪಿ ವತಿಯಿಂದ ಅನುಮತಿ ಪಡೆಯಲು ರಸ್ತೆ ದುರಸ್ತಿಗೆಂದೇ ಎಷ್ಟು ಮೊತ್ತ ಪಾವತಿಸಿರುತ್ತಾರೆ; ಪಾವತಿಸಿದ್ದಲ್ಲಿ ಕಳೆದ ಮೂರು ವರ್ಷಗಳ ಇದರ ಸಂಪೂರ್ಣ ವಿವರ ನೀಡುವುದು; | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವತಿಯಿಂದ, ಪಾವತಿಸಿರುವ ಮೊತ್ತದ ವಿವರ ಈ ಕೆಳಕಂಡಂತಿರುತ್ತದೆ. |

| ಕ್ರ.ಸಂ | ವರ್ಷ | ಮೊತ್ತ (ರೂ.ಗಳಲ್ಲಿ) |
|---|---|---|
| 1 | 2018-19 | - |
| 2 | 2019-20 | 13,50,27,223.00 |
| 3 | 2020-21 (ಫೆಬ್ರವರಿ–21ರ ಅಂತ್ಯಕ್ಕೆ) | 2,16,02,382.00 |
| ಒಟ್ಟು | | **15,66,29,605.00** |

| | | |
|---|---|---|
| | | ಸದರಿ Permission Fee ಯಲ್ಲಿ ರಸ್ತೆ ದುರಸ್ತಿ ಮೊತ್ತವೂ ಸೇರಿರುವುದರಿಂದ, ರಸ್ತೆ ದುರಸ್ತಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಜವಾಬ್ದಾರಿಯೇ ಆಗಿರುತ್ತದೆ.<br><br>ಸಂಪೂರ್ಣ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಈ) | ರಸ್ತೆ ದುರಸ್ತಿ ಕಾರ್ಯವನ್ನು ಕೈಗೆತ್ತಿಕೊಳ್ಳಲು ಬೆಸ್ಕಾಂ ವತಿಯಿಂದ ಬಿಬಿಎಂಪಿಗೆ ಪೂರ್ಣ ಪ್ರಮಾಣದಲ್ಲಿ ಮೊತ್ತ ಸಂದಾಯವಾಗಿದೆಯೇ; ಹಾಗಿದ್ದಲ್ಲಿ ಈವರೆಗೆ ರಸ್ತೆ ದುರಸ್ತಿ ಕಾರ್ಯ ಕೈಗೆತ್ತಿಕೊಳ್ಳದಿರಲು ಕಾರಣಗಳೇನು? | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಹಾಗೂ ಬಿಬಿಎಂಪಿ ನಡುವಿನ ಒಪ್ಪಂದದ ಜ್ಞಾಪಕ ಪತ್ರ (Memorandum Of Agreement), ಅನ್ವಯ ಬೆಸ್ಕಾಂ ವತಿಯಿಂದ ಬಿಬಿಎಂಪಿಗೆ ದಾಸರಹಳ್ಳಿ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಗೆ ಸಂಬಂಧಿಸಿದಂತೆ Permission Fee ರೂ.15,66,29,605.00 ಪುಸ್ತಕ ಹೊಂದಾಣಿಕೆ ಮಾಡಿಕೊಳ್ಳಲು ಸಹಿ ಹಾಕಲಾಗಿದೆ. ಸದರಿ Permission Fee ಯಲ್ಲಿ ರಸ್ತೆ ದುರಸ್ತಿ ಮೊತ್ತವೂ ಸೇರಿರುವುದರಿಂದ, ರಸ್ತೆ ದುರಸ್ತಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಬರುತ್ತದೆ. |

**ಸಂಖ್ಯೆ: ಎನರ್ಜಿ 68 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1342 |
| ಸದಸ್ಯರ ಹೆಸರು | : | ಶ್ರೀ ಮಂಜುನಾಥ ಹೆಚ್.ಪಿ. (ಹುಣಸೂರು) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಹುಣಸೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಹಾಡಿಗಳಲ್ಲಿ ಸುಮಾರು 4000ಕ್ಕು ಹೆಚ್ಚು ಕುಟುಂಬಗಳು ವಾಸಿಸುತ್ತಿದ್ದು, ಈ ಪೈಕಿ ಕೆಲವು ಮನೆಗಳಿಗೆ ವಿದ್ಯುತ್ ಸಂಪರ್ಕ ಇಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ವ್ಯಾಪ್ತಿಯಲ್ಲಿರುವ ಹುಣಸೂರು ವಿಧಾನ ಸಭಾ ಕ್ಷೇತ್ರದಲ್ಲಿ ಇರುವ ಹಾಡಿಗಳಿಗೆ ವಿದ್ಯುತ್ ಸೌಲಭ್ಯ ಒದಗಿಸುವ ಕಾರ್ಯವನ್ನು ಸರ್ಕಾರದ Integrated Tribal Development Project (ITDP) ವತಿಯಿಂದ ಮಾಡಲಾಗುತ್ತಿದ್ದು, ಸದರಿ ಮನೆಗಳಿಗೆ ವಿದ್ಯುತ್ ಮೂಲಭೂತ ಸೌಕರ್ಯವನ್ನು ಕಲ್ಪಿಸಿ ವಿದ್ಯುತ್ ಸಂಪರ್ಕಕ್ಕಾಗಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ಅರ್ಜಿ ಸಲ್ಲಿಸಿದ ನಂತರ ವಿದ್ಯುತ್ ಸಂಪರ್ಕ ನೀಡಲಾಗುತ್ತಿದೆ.<br><br>ವಿದ್ಯುತ್ ಸಂಪರ್ಕ ಇಲ್ಲದಿರುವ ಹಾಡಿ ಮತ್ತು ಮನೆಗಳ ವಿಷಯದಲ್ಲಿ ಸಂಬಂಧಿಸಿದ ಫಲಾನುಭವಿಗಳು ಅಥವಾ ನಿರ್ದಿಷ್ಟ ಯೋಜನೆಗಳಡಿಯಲ್ಲಿ ಸಂಬಂಧಿಸಿದ ಇಲಾಖೆಗಳಿಂದ ಮನವಿ ಸ್ವೀಕೃತವಾದಲ್ಲಿ ನಿಯಮಾನುಸಾರ ಕ್ರಮ ಜರುಗಿಸಲಾಗುತ್ತದೆ. |
| ಆ) | ಹಾಗಿದ್ದಲ್ಲಿ, ಎಷ್ಟು ಮನೆಗಳಿಗೆ ವಿದ್ಯುತ್ ಸಂಪರ್ಕ ಒದಗಿಸಿರುವುದಿಲ್ಲ; (ಹಾಡಿಗಳವಾರು ಮನೆಗಳಾವಾರು ಸಂಪೂರ್ಣ ವಿವರ ನೀಡುವುದು) | |
| ಇ) | ವಿದ್ಯುತ್ ಸಂಪರ್ಕ ಒದಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | |
| ಈ) | ವಿದ್ಯುತ್ ಸಂಪರ್ಕ ಇಲ್ಲದ ಹಾಡಿ ಮನೆಗಳಿಗೆ ಯಾವಾಗ ವಿದ್ಯುತ್ ಸಂಪರ್ಕ ಒದಗಿಸಲಾಗುವುದು? | |

**ಸಂಖ್ಯೆ: ಎನರ್ಜಿ 63 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1305 |
| ಸದಸ್ಯರ ಹೆಸರು | : | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ತಿಗಡಿ ಗ್ರಾಮಕ್ಕೆ ಸರ್ಕಾರ 110 ಕೆ.ವಿ ವಿದ್ಯುತ್ ಉಪಕೇಂದ್ರ ಮಂಜೂರು ಮಾಡಿರುವುದು ನಿಜವೇ; | ಕಿತ್ತೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ತಿಗಡಿ ಗ್ರಾಮದಲ್ಲಿ 110/11 ಕೆ.ವಿ. ವಿದ್ಯುತ್ ಉಪಕೇಂದ್ರ ಸ್ಥಾಪಿಸುವ ಪ್ರಸ್ತಾವನೆಯು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ 80ನೇ ತಾಂತ್ರಿಕ ಸಮನ್ವಯ ಸಮಿತಿಯ ಸಭೆಯಲ್ಲಿ ಅನುಮೋದನೆಗೊಂಡಿರುತ್ತದೆ. |
| ಆ) | ಹಾಗಿದ್ದಲ್ಲಿ, ಟೆಂಡರ್ ಕರೆದು ಈ ಕಾಮಗಾರಿ ಆರಂಭಿಸಲು ಸರ್ಕಾರದ ಕ್ರಮವೇನು; | ಸದರಿ 110/11 ಕೆ.ವಿ. ವಿದ್ಯುತ್ ಉಪಕೇಂದ್ರ ಸ್ಥಾಪನೆಗೆ ಲೈನ್ ಸರ್ವೇ ಕಾಮಗಾರಿ ಪೂರ್ಣಗೊಂಡಿದ್ದು, ಅಂದಾಜು ಪಟ್ಟಿಯನ್ನು ತಯಾರಿಸುವ ಪ್ರಕ್ರಿಯೆಯು ಜಾರಿಯಲ್ಲಿರುತ್ತದೆ. |
| ಇ) | ಯಾವ ಕಾಲಮಿತಿಯಲ್ಲಿ ಈ ಕಾಮಗಾರಿ ಆರಂಭಿಸಲಾಗುವುದು? | |

ಸಂಖ್ಯೆ: ಎನರ್ಜಿ 52 ಪಿಪಿಎಂ 2021

ಬಿ.ಎಸ್.

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1339 |
| ಸದಸ್ಯರ ಹೆಸರು | : | ಶ್ರೀ ವೆಂಕಟರಮಣಯ್ಯ ಟಿ. (ದೊಡ್ಡಬಳ್ಳಾಪುರ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| ಪ್ರಶ್ನೆ | | ಉತ್ತರ |
|---|---|---|
| ಅ) | ದೊಡ್ಡಬಳ್ಳಾಪುರ ವಿಧಾನ ಸಭಾ ಕ್ಷೇತ್ರದ ಎಷ್ಟು ಗ್ರಾಮಗಳಲ್ಲಿ ನಿರಂತರ ಜ್ಯೋತಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿದೆ; | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯಿಂದ ದೊಡ್ಡಬಳ್ಳಾಪುರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ಎಲ್ಲಾ 314 ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆ ಅಡಿಯಲ್ಲಿ ವಿದ್ಯುತ್ ಸಂಪರ್ಕವನ್ನು ಕಲ್ಪಿಸಲಾಗಿರುತ್ತದೆ. ಸದರಿ ಯೋಜನೆಯಡಿ ಯಾವುದೇ ಗ್ರಾಮಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವುದು ಬಾಕಿ ಇರುವುದಿಲ್ಲ. |
| ಆ) | ಇನ್ನು ಎಷ್ಟು ಗ್ರಾಮಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಬಾಕಿ ಇದೆ; | |
| ಇ) | ಈ ಬಗ್ಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | |

**ಸಂಖ್ಯೆ: ಎನರ್ಜಿ 61 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

39

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1288 |
| 2 | ಸದಸ್ಯರ ಹೆಸರು | : | ಶ್ರೀ ಹ್ಯಾರಿಸ್ ಎನ್.ಎ |
| 3 | ಉತ್ತರಿಸುವ ದಿನಾಂಕ | : | 09-03-2021 |
| 4 | ಉತ್ತರಿಸುವವರು | : | ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಪ್ರದೇಶ ವ್ಯಾಪ್ತಿಯಲ್ಲಿ ಮತ್ತೆ ಕೋವಿಡ್ ಸೋಂಕಿನ ಮರು ಪ್ರವೇಶವನ್ನು ನಿಯಂತ್ರಿಸಲು ಸರ್ಕಾರ ಕೈಗೊಂಡ ಪರಿಣಾಮಕಾರಿ ಕ್ರಮಗಳು ಯಾವುವು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಪ್ರದೇಶ ವ್ಯಾಪ್ತಿಯಲ್ಲಿ ಮತ್ತೆ ಕೋವಿಡ್ ಸೋಂಕಿನ ಮರು ಪ್ರವೇಶವನ್ನು ನಿಯಂತ್ರಿಸಲು ಈ ಕೆಳಕಂಡಂತೆ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br>1. UK/Brazil/South Africa ದೇಶಗಳಿಂದ ಬರುವ ವ್ಯಕ್ತಿಗಳ RTPCR ಪರೀಕ್ಷೆಗಳನ್ನು ಬೆಂಗಳೂರು ವಿಮಾನ ನಿಲ್ದಾಣದಲ್ಲಿ ಕೈಗೊಂಡು ನೆಗೆಟಿವ್ ರಿಪೋರ್ಟ್ ಬಂದ ನಂತರ Home Isolationಗೆ ಕಳುಹಿಸಿ ನಿಗವಹಿಸಲಾಗುತ್ತಿದೆ.<br>2. ಇತರೆ ರಾಜ್ಯಗಳಾದ ಕೇರಳ ಹಾಗೂ ಮಹಾರಾಷ್ಟ್ರ ರಾಜ್ಯಗಳಿಂದ ಬರುವ ವ್ಯಕ್ತಿಗಳ ನೆಗೆಟಿವ್ RTPCR ರಿಪೋರ್ಟ್ ಪಡೆದು ನಿರ್ವಹಿಸಲಾಗುತ್ತಿದೆ.<br>3. ಪ್ರತಿ ಕೋವಿಡ್ ಪಾಸಿಟಿವ್ ವ್ಯಕ್ತಿಯ ಪ್ರಾಥಮಿಕ ಹಾಗೂ ದ್ವಿತೀಯ ಸಂಪರ್ಕಿತರ ಪಟ್ಟಿಮಾಡಿ ಕೋವಿಡ್ ರೋಗಲಕ್ಷಣಗಳಿಗೆ ನಿಗಾವಹಿಸಲು ಕ್ರಮವಹಿಸಲಾಗುತ್ತಿದೆ.<br>4. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ILI/SARI ಪ್ರಕರಣಗಳ ಪಟ್ಟಿಮಾಡಿ ಸರ್ವೇ ಕಾರ್ಯ ನಡೆಸಿ ಪರೀಕ್ಷೆಗೆ ಒಳಪಡಿಸಲಾಗುತ್ತಿದೆ.<br>5. ಸಾರ್ವಜನಿಕರಿಗೆ ಕೋವಿಡ್-19 Appropriate Behaviour ಬಗ್ಗೆ ವಿವಿಧ ಮಾಧ್ಯಮಗಳ ಮೂಲಕ ಅರಿವು ಮೂಡಿಸಲಾಗುತ್ತಿದೆ. |
| ಆ | ಬೆಂಗಳೂರು ಸೇರಿದಂತೆ ರಾಜ್ಯದೆಲ್ಲೆಡೆ ಸೋಂಕು ಪೀಡಿತ ರಾಜ್ಯಗಳಿಂದ ಬರುವವರ ಕುರಿತು ಅನುಸರಿಸುತ್ತಿರುವ ಕ್ರಮಗಳೇನು; | ಸೋಂಕು ಪೀಡಿತ ರಾಜ್ಯಗಳಿಂದ ಬರುವವರ ನೆಗೆಟಿವ್ RTPCR ರಿಪೋರ್ಟ್ ಪಡೆಯಲು ಕ್ರಮವಹಿಸಲಾಗಿದೆ, ತದನಂತರ ವ್ಯಕ್ತಿಗಳನ್ನು Home care ಗೆ ಶಿಫಾರಸ್ಸು ಮಾಡಿ ನಿಗವಹಿಸಲಾಗುತ್ತಿದೆ. |
| ಇ | ಸಾಮಾಜಿಕ / ಧಾರ್ಮಿಕ ಕಾರ್ಯ ಕ್ರಮಗಳು, ಸಭೆ ಸಮಾರಂಭಗಳು, ಮಧುವೆ ಮತ್ತಿತರ ಸಮಾರಂಭಗಳಲ್ಲಿ ಸೋಂಕು ತೀವ್ರಗತಿಯಲ್ಲಿ ಹರಡದಂತೆ ಕೈಗೊಳ್ಳಲಾಗುತ್ತಿರುವ ಮುಂಜಾಗರೂಕತಾ ಕ್ರಮಗಳು ಯಾವುವು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಎಲ್ಲಾ ಸಾಮಾಜಿಕ, ಧಾರ್ಮಿಕ ಕಾರ್ಯಕ್ರಮಗಳು, ಸಭೆ ಸಮಾರಂಭಗಳು, ಮದುವೆ ನಡೆಯುವ ಮುಂಚಿತವಾಗಿ ಮಾಹಿತಿಯನ್ನು ಪಡೆದು, ಸದರಿ ಸ್ಥಳಗಳಲ್ಲಿ ಮಾರ್ಷಲ್‌ಗಳನ್ನು, ಹಿರಿಯ ಆರೋಗ್ಯ ಪರಿವೀಕ್ಷಕರ ಮುಖಾಂತರ ಕೋವಿಡ್ ನಿಯಂತ್ರಣಕ್ಕೆ |

| | | |
|---|---|---|
| | | ಸಂಬಂಧಿಸಿದಂತೆ ಮಾರ್ಷಲ್‌ಗಳು ಮಾಸ್ಕ್ ಧರಿಸುವಂತೆ, ದೈಹಿಕ ಅಂತರ ಪಾಲಿಸುವಂತೆ ಹಾಗೂ ಹ್ಯಾಂಡ್ ಸ್ಯಾನಿಟೈಸರ್ ಬಳಸುವಂತೆ ತಿಳುವಳಿಕೆ ನೀಡಲಾಗುತ್ತಿದೆ. ಈ ಸ್ಥಳಗಳಲ್ಲಿ ಮಾರ್ಷಲ್ ಸ್ಕ್ವಾಡ್ ಬಳಸಿ ಅಡುಗೆ ತಂಡ ಶುಚಿಗಾರರು ಹಾಗೂ ಕೆಲವು ಮಂದಿಗೆ ಪರೀಕ್ಷೆಗೆ ಒಳಪಡಿಸಲಾಗುತ್ತಿದೆ. |
| ಈ | ಕೋವಿಡ್ ಪ್ರಕರಣಗಳನ್ನು ನಿಯಂತ್ರಿಸುವಲ್ಲಿ ಸಮುದಾಯದ ಸಹಭಾಗಿತ್ವ ಬಳಸಿಕೊಳ್ಳುವ ಕುರಿತ ಪ್ರಸ್ತಾವನೆಗಳು ಯಾವುವು; | RWA / ವಿವಿಧ ಸಂಘ ಸಂಸ್ಥೆಗಳ ಮುಖ್ಯಸ್ಥರೊಂದಿಗೆ V.C. ಸಭೆಗಳನ್ನು ನಡೆಸಿ Do's and Don'ts ಬಗ್ಗೆ ಹಾಗೂ ಸಮುದಾಯದ ಸಹಭಾಗಿತ್ವ ಕುರಿತು ಚರ್ಚೆ ನಡೆಸಿ ಕ್ರಮವಹಿಸಲಾಗುತ್ತಿದೆ. |
| ಉ | ಕೋವಿಡ್ ಸೋಂಕು ಹರಡದಂತೆ ವಿಶೇಷತಃ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಅತ್ಯಂತ ಎಚ್ಚರಿಕೆಯ ಮುಂಜಾಗರೂಕತಾ ಕ್ರಮಗಳನ್ನು ಜಾರಿಯಲ್ಲಿಡಲು ಸರ್ಕಾರದ ಕ್ರಮಗಳೇನು? | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೋವಿಡ್ ಸೋಂಕು ಹರಡದಂತೆ ಈ ಕೆಳಕಂಡ ಮುಂಜಾಗರೂಕತಾ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>1. ಕೋವಿಡ್ Appropriate Behaviour ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸಲಾಗುತ್ತಿದೆ.<br>2. ಮಾರ್ಷಲ್‌ಗಳನ್ನು/ಹಿರಿಯ ಆರೋಗ್ಯ ಪರಿವೀಕ್ಷಕರುಗಳನ್ನು ಕೋವಿಡ್-19 ನಿಯಮಗಳನ್ನು ಉಲ್ಲಂಘಿಸಿದಲ್ಲಿ ದಂಡ ವಿಧಿಸಲಾಗುತ್ತಿದೆ.<br>3. ಜನಸಂದಣಿ ಪ್ರದೇಶಗಳಲ್ಲಿ, ILI/SARI ಪ್ರಕರಣಗಳಿಗೆ ಹಾಗೂ Containment zone ನಲ್ಲಿ ಸರ್ವೆ ಕಾರ್ಯ ಕೈಗೊಂಡು ಪರೀಕ್ಷೆ ಮಾದರಿಗಳನ್ನು ಸಂಗ್ರಹಿಸಿ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |

**ಸಂಖ್ಯೆ: ನಅಇ 60 ಬಿಬಿಎಲ್ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

71

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1312 |
| ಸದಸ್ಯರ ಹೆಸರು | : | ಶ್ರೀ ಗೂಳಿಹಟ್ಟಿ ಡಿ. ಶೇಖರ್ (ಹೊಸದುರ್ಗ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಿಂದ ಪ್ರಸ್ತುತದವರೆಗೆ ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆ ವ್ಯಾಪ್ತಿಯಲ್ಲಿ ರೈತರ ಅಕ್ರಮ ಸಕ್ರಮ ವಿದ್ಯುತ್ ಸಂಪರ್ಕ ಕಲ್ಪಿಸಲು ತಮಿಳುನಾಡಿನ ರಾಮಲಿಂಗಂ ಕಂಪನಿಯ ಗುತ್ತಿಗೆದಾರರಿಗೆ ಎಷ್ಟು ಮೊತ್ತದ ಟೆಂಡರ್ ನೀಡಲಾಗಿದೆ; | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ, ಅಕ್ರಮ ಸಕ್ರಮ ಯೋಜನೆಯಡಿಯಲ್ಲಿ ಕಳೆದ 3 ವರ್ಷಗಳಿಂದ ಪ್ರಸ್ತುತದವರೆಗೆ ರೈತರ ನೀರಾವರಿ ಪಂಪ್‌ಸೆಟ್ ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಮೆ॥ ರಾಮಲಿಂಗಂ ಕನ್‌ಸ್ಟ್ರಕ್ಷನ್ ಕಂಪನಿ ಪ್ರೈ. ಲಿಮಿಟೆಡ್, ಬೆಂಗಳೂರು ರವರಿಗೆ ದಾವಣಗೆರೆ ವಿಭಾಗದಲ್ಲಿ ರೂ.9984.72 ಲಕ್ಷ ಮೊತ್ತಕ್ಕೆ ಮತ್ತು ಚಿತ್ರದುರ್ಗ ವಿಭಾಗದಲ್ಲಿ ರೂ.15884.97 ಲಕ್ಷ ಮೊತ್ತಕ್ಕೆ ಟೆಂಡರ್ ನೀಡಲಾಗಿದೆ. |
| ಆ) | ಎಷ್ಟು ಮೊತ್ತ ಹಾಗೂ ಟೆಂಡರ್‌ನಲ್ಲಿ ಎಸ್.ಆರ್. ದರಕ್ಕಿಂತ ಎಷ್ಟು ಪಟ್ಟು ಹೆಚ್ಚಿಗೆ ಅಥವಾ ಕಡಿಮೆ ಮೊತ್ತಕ್ಕೆ ಟೆಂಡರ್ ನೀಡಲಾಗಿದೆ; ಈ ಕಾಮಗಾರಿಗಳನ್ನು ಯಾವಾಗ ಪ್ರಾರಂಭಿಸಲಾಗುವುದು; ಈ ಕಂಪನಿಯವರು ಉಪ ಗುತ್ತಿಗೆ ನೀಡುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | • ಕೆಟಿಪಿಪಿ ನಿಯಮಾನುಸಾರ ಈ–ಪ್ರೋಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಟೆಂಡರ್ ಕರೆದು ಅರ್ಹ ಮತ್ತು ಎಲ್–1 ಗುತ್ತಿಗೆ ಆಧಾರದಲ್ಲಿ ದಾವಣಗೆರೆ ವಿಭಾಗದಲ್ಲಿ ಶೇ.26.00 ರಷ್ಟು ಮತ್ತು ಚಿತ್ರದುರ್ಗ ವಿಭಾಗದಲ್ಲಿ ಶೇ.26.09 ರಷ್ಟು Tender Premium ನೊಂದಿಗೆ ದರ ಗುತ್ತಿಗೆ ನೀಡಲಾಗಿರುತ್ತದೆ.<br>• ಈ ಕಾಮಗಾರಿಗಳನ್ನು 2017ನೇ ಇಸವಿಯಲ್ಲಿ ಪ್ರಾರಂಭಿಸಲಾಗಿರುತ್ತದೆ ಹಾಗೂ ಸುಮಾರು ಏಪ್ರಿಲ್–2021ರ ಅಂತ್ಯಕ್ಕೆ ಕಾಮಗಾರಿಗಳನ್ನು ಪೂರ್ಣಗೊಳಿಸಲು ಉದ್ದೇಶಿಸಲಾಗಿದೆ.<br>• ಪ್ರಸ್ತುತ ದಾವಣಗೆರೆ ವಿಭಾಗದಲ್ಲಿ ನೋಂದಾಯಿತ ಅರ್ಜಿಗಳ ಸಂಖ್ಯೆ:9571, ಇವುಗಳಲ್ಲಿ 9524 ಐ.ಪಿ. ಸೆಟ್‌ಗಳಿಗೆ ಮತ್ತು ಚಿತ್ರದುರ್ಗ ವಿಭಾಗದಲ್ಲಿ ನೋಂದಾಯಿತ ಅರ್ಜಿಗಳ ಸಂಖ್ಯೆ:8990, ಇವುಗಳಲ್ಲಿ 8789 ಐ.ಪಿ. ಸೆಟ್‌ಗಳಿಗೆ ಮೂಲ ಭೂತ ಸೌಕರ್ಯ ಒದಗಿಸಲಾಗಿರುತ್ತದೆ.<br>• ಈ ಕಂಪನಿಯವರು ಯಾವುದೇ ಉಪ ಗುತ್ತಿಗೆ ನೀಡಿರುವುದು ಕಂಡು ಬಂದಿರುವುದಿಲ್ಲ. |

ಸಂಖ್ಯೆ: ಎನರ್ಜಿ 53 ಪಿಪಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ವಿಧಾನ ಸಭೆಯ ಸದಸ್ಯರಾದ ಮಾನ್ಯ ಶ್ರೀ ಮಂಜುನಾಥ್ ಎ. (ಮಾಗಡಿ) ಇವರ ಪ್ರಶ್ನೆ ಸಂಖ್ಯೆ: 1350ಕ್ಕೆ ಅನುಬಂಧ

ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯನ್ನು 2 ಹಂತಗಳಲ್ಲಿ ಕೈಗೊಳ್ಳಲಾಗುತ್ತಿದೆ.

**ಭೌತಿಕ ಪ್ರಗತಿ:**

**ಮೊದಲನೇ ಹಂತ:** ಮೊದಲನೆ ಹಂತದ ಏತ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. ಭೌತಿಕ ಪ್ರಗತಿಯ ಪ್ರಸ್ತುತ ಹಂತದ ವಿವರ ಈ ಕೆಳಗಿನಂತಿದೆ.

- ✓ ಒಟ್ಟಾರೆ 8 ವಿಯರ್‌ಗಳ ಪೈಕಿ ವಿಯರ್ ಸಂ. 1,4,5,6,8 ಕಾಮಗಾರಿಗಳು ಪೂರ್ಣಗೊಂಡಿದ್ದು, ವಿಯರ್ ಸಂ.2, 7 ರ ಕಾಮಗಾರಿಗಳು ಮುಕ್ತಾಯದ ಹಂತದಲ್ಲಿವೆ. ವಿಯರ್-3ಕ್ಕೆ ಸಂಬಂಧಿಸಿದಂತೆ GPS co-ordinates ನಲ್ಲಿ ಕಂಡು ಬಂದಂತಹ ವ್ಯತ್ಯಾಸದಿಂದ ಅರಣ್ಯ ಇಲಾಖೆಯ ಆದೇಶದಂತೆ ಕಾಮಗಾರಿಗಳು ಸ್ಥಗಿತಗೊಂಡಿದ್ದವು. ಆದರೆ, ಸದರಿ GPS co-ordinates ಗಳ ಮರು ಪರಿಶೀಲನೆಯ ನಂತರ ಈ ಹಿಂದೆ 2015ರಲ್ಲಿ ಅನುಮತಿಸಲ್ಪಟ್ಟ ಪ್ರದೇಶದಲ್ಲಿ ಪಂಪ್‌ಹೌಸ್ ಸಂ.3 ಮತ್ತು ವಿಯರ್-3ರ ಕಾಮಗಾರಿಗಳನ್ನು ಇತ್ತೀಚೆಗೆ ಪುನರ್-ಪ್ರಾರಂಭಿಸಲಾಗಿರುತ್ತದೆ. ಬಾಕಿ ಉಳಿದ Changein GPS co-ordinates ಗೆ ಸಂಬಂಧಿಸಿದ ಗೊಂದಲ ನಿವಾರಣೆ ಕುರಿತು ಅರಣ್ಯ ಇಲಾಖೆಯೊಂದಿಗೆ ವ್ಯವಹರಿಸಲಾಗುತ್ತಿದೆ.
- ✓ 9 ಪಂಪ್‌ಹೌಸ್‌ಗಳ ಪೈಕಿ ಪಂಪ್‌ಹೌಸ್ ಸಂ. 3 ಹೊರತುಪಡಿಸಿ ಇನ್ನುಳಿದ ಎಲ್ಲಾ 8 ಪಂಪ್‌ಹೌಸ್ ಕಾಮಗಾರಿಗಳು ಪೂರ್ಣಗೊಂಡಿರುತ್ತದೆ.
- ✓ 4 ವಿತರಣಾ ತೊಟ್ಟಿಗಳ ಪೈಕಿ ವಿತರಣಾ ತೊಟ್ಟಿ ಸಂ.3 ನ್ನು ಹೊರತುಪಡಿಸಿ ಇನ್ನುಳಿದ ವಿತರಣಾ ತೊಟ್ಟಿಗಳ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ. ವಿತರಣಾ ತೊಟ್ಟಿ 3 ರ ಕಾಮಗಾರಿಯು ಪ್ರಗತಿಯಲ್ಲಿದೆ.
- ✓ ಒಟ್ಟು 126.31 ಕಿ.ಮೀ ಉದ್ದದ ಏರುಕೊಳವೆಯ ಪೈಕಿ, ಇದುವರೆಗೆ 112 ಕಿ.ಮೀ ಏರುಕೊಳವೆ ಕಾಮಗಾರಿಯು ಪೂರ್ಣಗೊಂಡಿದ್ದು, ಉಳಿದ ಕಾಮಗಾರಿಗಳು ಪ್ರಗತಿಯಲ್ಲಿವೆ.
- ✓ 400/220 ಕೆ.ವಿ ವಿದ್ಯುತ್ ಸ್ಥಾವರ ಮತ್ತು ಸಬ್‌ಸ್ಟೇಷನ್ ಕಾಮಗಾರಿಗಳು ಕ್ರಮವಾಗಿ ಶೇ.95% ಮತ್ತು ಶೇ.85% ರಷ್ಟು ಪೂರ್ಣಗೊಂಡಿವೆ.
- ✓ ವಿದ್ಯುತ್ ವಿತರಣಾ ಕಾಮಗಾರಿ: ಎಲ್ಲಾ 08 ಸಬ್ ಸ್ಟೇಷನ್‌ಗಳಿಗೆ ವಿದ್ಯುತ್ ಅನ್ನು 324 ಟವರ್ ಗಳ ನಿರ್ಮಾಣ ಮಾಡಿ ವಿದ್ಯುತ್ ವಾಹಕಗಳನ್ನು ಅಳವಡಿಸಿ, ವಿದ್ಯುತ್ ಅನ್ನು ಸರಬರಾಜು ಮಾಡಲಾಗುವುದು. ಒಟ್ಟು 324 ಟವರ್ ಗಳ ಪೈಕಿ ಇಲ್ಲಿಯವರೆಗೆ 179 ಟವರ್‌ಗಳನ್ನು ಅಳವಡಿಸಲಾಗಿದೆ ಹಾಗೂ 52.25 ಕಿ.ಮೀ ಉದ್ದದ ವಿದ್ಯುತ್ ವಾಹಕ ಸಂಬಂಧಸಿದಂತೆ 16.4 ಕಿ.ಮೀ ವಿದ್ಯುತ್ ವಾಹಕವನ್ನು ಅಳವಡಿಸಲಾಗಿದೆ. ಉಳಿದ ಕಾಮಗಾರಿಗಳು ಪ್ರಗತಿಯಲ್ಲಿವೆ.
- ✓ ಒಟ್ಟಾರೆ ಮೊದಲನೇ ಹಂತದ ಏತ ಕಾಮಗಾರಿಗಳು ಮತ್ತು ವಿದ್ಯುತ್ ಕಾಮಗಾರಿಗಳನ್ನು ಪೂರ್ಣಗೊಳಿಸಿ 2021ರ ಮುಂಗಾರಿನಲ್ಲಿ ಪ್ರಾಯೋಗಿಕವಾಗಿ ನೀರನ್ನು ಹರಿಸಿ, ಯೋಜನೆಯನ್ನು ಭಾಗಶಃ ಚಾಲನೆಗೊಳಿಸಲು ಯೋಜಿಸಲಾಗಿದೆ.

**ಎರಡನೇ ಹಂತ:** ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಎರಡನೇ ಹಂತದಲ್ಲಿ ಸಕಲೇಶಪುರ ತಾಲ್ಲೂಕಿನ ಹರವನಹಳ್ಳಿ ಹತ್ತಿರ ವಿತರಣಾ ತೊಟ್ಟಿಯಿಂದ 260.00 ಕಿ.ಮೀ ಉದ್ದದ ಗುರುತ್ವ ಕಾಲುವೆಯನ್ನು (ಮಾರ್ಗದ ಮಧ್ಯದಲ್ಲಿ ಸುಮಾರು 10.47 ಕಿ.ಮೀ ಉದ್ದದ ಮೇಲ್ಗಾಲುವೆ ಒಳಗೊಂಡಂತೆ) ನಿರ್ಮಿಸುವುದು ಹಾಗೂ ಸಂಬಂಧಪಟ್ಟ ಫೀಡರ್ ಕಾಲುವೆಗಳನ್ನು ನಿರ್ಮಿಸುವುದು, ಭೈರಗೊಂಡ್ಲು ಜಲಾಶಯ ನಿರ್ಮಾಣ, ಭೈರಗೊಂಡ್ಲು ಜಲಾಶಯದಿಂದ ಕುಂದಾಣ ವರಗೆ ನೀರನ್ನು ಎತ್ತುವ ಕಾಮಗಾರಿ, ಕೋಲಾರ ಮತ್ತು ಶ್ರೀನಿವಾಸಪುರ ಫೀಡರ್ ನಿರ್ಮಾಣ ಕಾಮಗಾರಿಗಳನ್ನು ಒಳಗೊಂಡಿರುತ್ತದೆ.

- ✓ ಎರಡನೇ ಹಂತದ ಗುರುತ್ವ ಕಾಲುವೆಯ ಪೂರ್ಣ ಉದ್ದಕ್ಕೆ ಕಾಮಗಾರಿಗಳನ್ನು ಗುತ್ತಿಗೆ ವಹಿಸಲಾಗಿದ್ದು, ಕಿ.ಮೀ 0.00 ರಿಂದ ಕಿ.ಮೀ 240.00 ವರೆಗಿನ ಕಾಮಗಾರಿಗಳು ಪ್ರಗತಿಯಲ್ಲಿದ್ದು, (ಕಿ.ಮೀ 199.620 ನಿಂದ 210.090 ಕಿ.ಮೀ ವರೆಗಿನ ಬೃಹತ್ ಮೇಲ್ಗಾಲುವೆ ಒಳಗೊಂಡಂತೆ), ಸುಮಾರು 78 ಕಿ.ಮೀ ಉದ್ದದ ಕಾಮಗಾರಿಗಳು ಪೂರ್ಣಗೊಂಡಿರುತ್ತದೆ.

✓ ಭೈರಗೊಂಡ್ಲು ಜಲಾಶಯ ನಿರ್ಮಾಣ ಕಾಮಗಾರಿಗೆ ಸಂಬಂಧಿಸಿದಂತೆ, ಗುತ್ತಿಗೆದಾರರು ಕಾಮಗಾರಿಯನ್ನು ಪ್ರಾರಂಭಿಸಲು ಪೂರ್ವಸಿದ್ದತಾ ಕೆಲಸ ಕಾರ್ಯಗಳನ್ನು ಕೈಗೊಂಡಾಗ ಕೊರಟಗೆರೆ ತಾಲ್ಲೂಕಿನ ರೈತರು ದೊಡ್ಡಬಳ್ಳಪುರ ತಾಲ್ಲೂಕಿನ ಭೂಸ್ವಾಧೀನ ದರಗಳಂತೆಯೇ, ಏಕರೂಪ ಪರಿಹಾರದರ ನೀಡಲು ಒತ್ತಾಯಿಸಿದ್ದರಿಂದ ಕಾಮಗಾರಿಯು ಪ್ರಸಕ್ತ ಸ್ಥಗಿತಗೊಂಡಿರುತ್ತದೆ.

**ಫೀಡರ್ ಕಾಲುವೆ ಕಾಮಗಾರಿಗಳು**

**ಭೈರಗೊಂಡ್ಲು ಜಲಾಶಯಕ್ಕಿಂತ ಮೊದಲು ಕವಲೊಡೆಯುವ ಫೀಡರ್ ಕಾಲುವೆಗಳನ್ನು ಕೈಗೆತ್ತಿಕೊಳ್ಳಲಾಗಿದೆ.**

✓ **ಟಿ.ಜಿ.ಹಳ್ಳಿ ಮತ್ತು ರಾಮನಗರ ಫೀಡರ್:** ಎತ್ತಿನಹೊಳೆ ಗುರುತ್ವ ಕಾಲುವೆಯ ಸರಪಳಿ 244.90 ಕಿ.ಮೀ ನಿಂದ ಹೊರಡುವ ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ರಾಮನಗರ ಜಿಲ್ಲೆಗಳಿಗೆ ಕುಡಿಯುವ ನೀರನ್ನು ಒದಗಿಸುವ ಹಾಗೂ ನೆಲಮಂಗಲ ತಾಲ್ಲೂಕಿನ 2 ಕೆರೆಗಳನ್ನು ತುಂಬಿಸುವ ರಾಮನಗರ ಫೀಡರ್ ಕಾಲುವೆಯ ಕಾಮಗಾರಿಯನ್ನು ಪ್ರಾರಂಭಿಸಲಾಗಿದ್ದು, ಪ್ರಗತಿಯಲ್ಲಿರುತ್ತದೆ.

✓ **ಮಧುಗಿರಿ ಫೀಡರ್:** ತುಮಕೂರು, ಕೊರಟಗೆರೆ, ಮಧುಗಿರಿ ಮತ್ತು ಪಾವಗಡ ತಾಲ್ಲೂಕುಗಳಿಗೆ ಕುಡಿಯುವ ನೀರಿಗಾಗಿ 1.163 ಟಿ.ಎಂ.ಸಿ ಮತ್ತು ಈ ಭಾಗದ 79 ಸಣ್ಣ ನೀರಾವರಿ ಕೆರೆಗಳಿಗೆ 1.476 ಟಿ.ಎಂ.ಸಿ. ನೀರನ್ನುಒದಗಿಸುವ ಮಧುಗಿರಿ ಫೀಡರ್ ಕಾಲುವೆಯ ಕಾಮಗಾರಿಯನ್ನು ಪ್ರಾರಂಭಿಸಲಾಗಿದ್ದು, ಪ್ರಗತಿಯಲ್ಲಿರುತ್ತದೆ.

✓ **ಗೌರಿಬಿದನೂರು ಫೀಡರ್:** ಗೌರಿಬಿದನೂರು ತಾಲ್ಲೂಕಿಗೆ ಕುಡಿಯುವ ನೀರಿಗಾಗಿ 0.506 ಟಿ.ಎಂ.ಸಿ ಮತ್ತು ಗೌರಿಬಿದನೂರು, ಕೊರಟಗೆರೆ, ಮಧುಗಿರಿ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕುಗಳ 107 ಸಣ್ಣ ನೀರಾವರಿ ಕೆರೆಗಳಿಗೆ 1.320 ಟಿ.ಎಂ.ಸಿ. ನೀರನ್ನು ಒದಗಿಸುವ ಗೌರಿಬಿದನೂರು ಫೀಡರ್ ಕಾಲುವೆಯ ಕಾಮಗಾರಿಯನ್ನು ಪ್ರಾರಂಭಿಸಲಾಗಿದ್ದು, ಪ್ರಗತಿಯಲ್ಲಿರುತ್ತದೆ.

ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಗೆ ಜನವರಿ 2021 ರ ಅಂತ್ಯಕ್ಕೆ ರೂ.7750.25 ಕೋಟಿಗಳ ಸಂಚಿತ ವೆಚ್ಚವಾಗಿರುತ್ತದೆ.

*****

81

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1310
2. ಸದಸ್ಯರ ಹೆಸರು : ಶ್ರೀ ಗೂಳಿಹಟ್ಟಿ ಡಿ.ಶೇಖರ್ (ಹೊಸದುರ್ಗ)
3. ಉತ್ತರಿಸಬೇಕಾದ ದಿನಾಂಕ : 09.03.2021

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಭದ್ರಾ ಮೇಲ್ದಂಡೆ ಯೋಜನೆಯ ತುಮಕೂರು ಬ್ರಾಂಚ್ ಕಾಲುವೆ ಉದ್ದ ಎಷ್ಟು ಕಿ.ಮೀ ವ್ಯಾಪ್ತಿ ಇರುತ್ತದೆ; ಇದರಲ್ಲಿ ಸ್ವಾಧೀನಪಡಿಸಿದ ಜಮೀನು ಎಷ್ಟು; ಸ್ವಾಧೀನ ಪಡಿಸಿದ ದಿನಾಂಕ, ವರ್ಷ ಯಾವಾಗ; ಎಷ್ಟು ಕಿ.ಮೀನಲ್ಲಿ ಎಷ್ಟು ಎಕರೆ ಜಮೀನು ಅವಶ್ಯಕತೆ ಇರುತ್ತದೆ; ಯಾವ ವರ್ಷ ಸ್ವಾಧೀನಪಡಿಸಲಾಗಿದೆ; | ಭದ್ರಾ ಮೇಲ್ದಂಡೆ ಯೋಜನೆಯಡಿ ಬರುವ ತುಮಕೂರು ಶಾಖಾ ಕಾಲುವೆಯು ಚೈ 0.00 ದಿಂದ ಚೈ 159.684 ಕಿ.ಮೀ (ಒಟ್ಟು 159.684 ಕಿ.ಮೀ) ಇರುತ್ತದೆ. ಈ ಕಾಮಗಾರಿಗಾಗಿ ಒಟ್ಟು 2980 ಎಕರೆ 22.08 ಗುಂಟೆಗಳ ಜಮೀನಿನ ಅವಶ್ಯಕತೆ ಇದ್ದು, ಭೂ-ಸ್ವಾಧೀನ ಪ್ರಕ್ರಿಯೆಗಳ/ಪ್ರಸ್ತಾವನೆಗಳ ಪ್ರಸ್ತುತ ಹಂತದ ವಿವರಗಳನ್ನು **ಅನುಬಂಧ-1** ರಲ್ಲಿ ಲಗತ್ತಿಸಿದೆ. |
| ಆ) | ಎಷ್ಟು ಕಿ.ಮೀ ಕಾಲುವೆಗೆ ಟೆಂಡರ್ ಕರೆದು ಗುತ್ತಿಗೆ ನೀಡಲಾಗಿದೆ; ಯಾವ ವರ್ಷದಲ್ಲಿ ಟೆಂಡರ್ ಕರೆಯಲಾಗಿದೆ; ಎಷ್ಟು ಕಿ.ಮೀ ಕಾಮಗಾರಿ ಮಾಡಲಾಗಿದೆ; ಎಷ್ಟು ಕಾಮಗಾರಿ ನಿರ್ವಹಿಸಬೇಕು; ಯಾವ ಕಾಲಮಿತಿಯಲ್ಲಿ ಈ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು; | ವಿವರಗಳನ್ನು **ಅನುಬಂಧ-2** ರಲ್ಲಿ ಲಗತ್ತಿಸಿದೆ. |
| ಇ) | ಕಾಲುವೆ ನಿರ್ಮಾಣಕ್ಕೆ ಈ ಹಿಂದೆ ಭೂ-ಸ್ವಾಧೀನ ಮಾಡಲಾಗಿದೆಯೇ ಅಥವಾ ಭೂ-ಸ್ವಾಧೀನದ ಮೊದಲೇ ಕಾಮಗಾರಿಗೆ ಟೆಂಡರ್ ಕರೆಯಲಾಗಿದೆಯೇ; ಭೂ-ಸ್ವಾಧೀನಕ್ಕೂ ಮೊದಲೇ ಯಾವ ಕಾರಣಕ್ಕೆ ಕಾಮಗಾರಿಗೆ ಟೆಂಡರ್ ಕರೆದು ನೀಡಲಾಗಿದೆ? | ಭದ್ರಾ ಮೇಲ್ದಂಡೆ ಯೋಜನೆಯ ವ್ಯಾಪ್ತಿಯಲ್ಲಿ ಬರುವ ತುಮಕೂರು ಶಾಖಾ ಕಾಲುವೆಯ 0.00 ದಿಂದ 159.684 ಕಿ.ಮೀ (ಒಟ್ಟು 159.684 ಕಿ.ಮೀ) ವ್ಯಾಪ್ತಿಯ ಭೂ-ಸ್ವಾಧೀನ ಪ್ರಸ್ತಾವನೆಗಳನ್ನು ಸಂಬಂಧ ಪಟ್ಟ ಇಲಾಖೆಗಳಿಗೆ ಸಲ್ಲಿಸಿ ಸಮಾನಾಂತರವಾಗಿ ಯೋಜನೆಯ ಕಾಮಗಾರಿಗಳನ್ನು ಶೀಘ್ರವೇ ಅನುಷ್ಠಾನಗೊಳಿಸಲು ಅನುವಾಗುವಂತೆ ಟೆಂಡರ್ ಕರೆಯಲಾಗಿರುತ್ತದೆ.<br><br>ಕಾಮಗಾರಿಗೆ ಅಗತ್ಯವಿರುವ ಜಮೀನು/ಪ್ರದೇಶವನ್ನು ಭೂ-ಮಾಲೀಕರ ಒಪ್ಪಿಗೆ ಪಡೆದು ಅಥವಾ ಇಲಾಖೆ, ಭೂ-ಮಾಲೀಕರು ಹಾಗೂ ಗುತ್ತಿಗೆದಾರರು ತ್ರಿಪಕ್ಷೀಯ ಕರಾರು ಒಪ್ಪಂದ ಮಾಡಿಕೊಂಡು ಕಾಮಗಾರಿಗಳನ್ನು ಕೈಗೊಳ್ಳುವ ನಿಬಂಧನೆಯನ್ನು ಸದರಿ ಕಾಮಗಾರಿಗಳ ಕರಾರು ಒಪ್ಪಂದದಲ್ಲಿ ವಿಧಿಸಲಾಗಿದ್ದು, ಅದರನ್ವಯ ಗುತ್ತಿಗೆದಾರರು ಜಮೀನು ಮಾಲೀಕರಿಂದ ಒಪ್ಪಿಗೆ ಪತ್ರ ಪಡೆದು/ ತ್ರಿಪಕ್ಷೀಯ ಕರಾರು ಮೂಲಕ ಜಮೀನುಗಳನ್ನು ಪಡೆದು ಕಾಮಗಾರಿಗಳನ್ನು ನಿರ್ವಹಿಸುತ್ತಿರುತ್ತಾರೆ. ಅಲ್ಲದೇ ಪಂಕ್ತೀಕರಣ ಮಾರ್ಗದಲ್ಲಿ ಬರುವ ಸರಕಾರಿ ಜಮೀನುಗಳಲ್ಲಿ ಕಾಮಗಾರಿಗಳನ್ನು ನಿರ್ವಹಿಸಲಾಗುತ್ತದೆ. ಪ್ರಸ್ತುತ ಕಾಮಗಾರಿಗೆ ಅಗತ್ಯವಿರುವ ಭೂ-ಸ್ವಾಧೀನ ಪ್ರಸ್ತಾವನೆಗಳು ಅನುಮೋದನೆಯ ವಿವಿಧ ಹಂತಗಳಲ್ಲಿರುತ್ತವೆ. |

**ಸಂಖ್ಯೆ: ಜಸಂಇ 21 ಡಬ್ಲ್ಯೂಎಲ್ಎ 2021**

(ಬಿ.ಎಸ್ ಯಡಿಯೂರಪ್ಪ)
ಮುಖ್ಯಮಂತ್ರಿ

# ಅನುಬಂಧ–1

## ಭದ್ರಾ ಮೇಲ್ದಂಡೆ ಯೋಜನೆ ವಲಯ ವ್ಯಾಪ್ತಿಯಡಿಯಲ್ಲಿ ಕೈಗೊಂಡಿರುವ ಕಾಮಗಾರಿಗಳಿಗೆ ಸ್ವಾಧೀನಪಡಿಸಿದ ಜಮೀನುಗಳ ವಿವರಗಳು

| ಕ್ರ. ಸಂ. | ಕಾಮಗಾರಿ | ಪ್ರಸ್ತಾಪಿತ ಸರಕಾರಿ ಮತ್ತು ಖಾಸಗಿ ಭೂಮಿ | | | 11(1) ಅಧಿಸೂಚನೆ ಆಗಿರುವ ಕ್ಷೇತ್ರ | 11(1) ಅಧಿಸೂಚನೆ ಆಗ ಬೇಕಾಗಿರುವ ಕ್ಷೇತ್ರ | 19(2) ಅಧಿಸೂಚನೆ ಯಾಗಿರುವ ಕ್ಷೇತ್ರ | ಅವಾರ್ಡ್ ಆಗಿರುವ ಕ್ಷೇತ್ರ | ಸ್ವಾಧೀನ ಪಡಿಸಿದ ದಿನಾಂಕ | ಷರಾ |
|---|---|---|---|---|---|---|---|---|---|---|
| | | ಖಾಸಗಿ | ಸರಕಾರಿ | ಒಟ್ಟು | ಎ–ಗುಂಟೆ | ಎ–ಗುಂಟೆ | ಎ–ಗುಂಟೆ | ಎ–ಗುಂಟೆ | | |
| | | ಎ–ಗುಂ | ಎ–ಗುಂ | ಎ–ಗುಂ | | | | | | |
| 1 | ತು.ಶಾ.ಕಾ–ಪ್ಯಾಕೇಜ್–1 (0.00 ದಿಂದ 10.00 ಕಿ.ಮೀ) | 579–36.64 | 21–38 | 601–34.64 | 530–24.4 | 71–10.24 | 459–18.12 | – | – | ಕಡೂರು ತಾಲ್ಲಾಕಿನ 10 ಗ್ರಾಮಗಳು ಮತ್ತು ಅಜ್ಜಂಪುರ ತಾಲ್ಲಾಕಿನ 8 ಗ್ರಾಮಗಳು ಸೇರಿ ಹಾಲಿ ಒಟ್ಟು 459–18–12 ಎಕರೆ ಜಮೀನಿಗೆ ಅವಾರ್ಡ ಜಾರಿಗೊಳಿಸಲು ಭೂ–ಸ್ವಾಧೀನಾಧಿಕಾರಿಗಳು ಅವಾರ್ಡ್ ಪ್ರಸ್ತಾವನೆ ಸಲ್ಲಿಸಿದ್ದು, ಭೂಸ್ವಾಧೀನ ಪಡಿಸುವ ಜಮೀನುಗಳ ಪರಿಹಾರ ಐತೀರ್ಪು ಅವಾರ್ಡ ಮೊತ್ತ ಒಟ್ಟು ರೂ.309.21 ಕೋಟಿ ಗಳಾಗಿದ್ದು, ದಿನಾಂಕ: 07.11.2020 ರಂದು (ಪತ್ರ ಸಂಖ್ಯೆ: ಕಂಇ 03 ಭೂಸ್ವಾಚಿ 2020) 459–18–12 ಎಕರೆ ಜಮೀನಿಗೆ 309.21 ಕೋಟಿಯ ಅನುಮೋದನೆ ದೊರೆತಿರುತ್ತದೆ. ಪ್ರಸ್ತುತ ಉಪ ವಿಭಾಗಾಧಿಕಾರಿಗಳ ಖಾತೆಯಲ್ಲಿ ರೂ. 74.84 ಕೋಟಿ ಇದ್ದು ಹಾಗೂ ಅವಶ್ಯವಿರುವ ಬಾಕಿ ಮೊತ್ತ ರೂ.234.36 ಕೋಟಿಗಳಷ್ಟಿರುತ್ತದೆ ಹಾಗೂ ಉಪ ವಿಭಾಗಾಧಿಕಾರಿ, ತರೀಕೆರೆ ಉಪ ವಿಭಾಗ ಇವರಿಗೆ ಸದರಿ ಖಾತೆಯಲ್ಲಿ ಲಭ್ಯವಿರುವ ರೂ.74.84 ಕೋಟಿ ಠೇವಣಿಯಲ್ಲಿ ಕೆಲವು ಗ್ರಾಮಗಳ ಜಮೀನಿನ ರೈತರಿಗೆ ಪರಿಹಾರದ ಮೊತ್ತವನ್ನು ಬಟವಾಡೆ ಮಾಡಲು ಕೋರಿ ಭೂಸ್ವಾಧೀನ ಅವಾರ್ಡ್ ಪ್ರಕ್ರಿಯೆಯನ್ನು ಮುಂದುವರೆಸಲು ಪತ್ರ ಬರೆಯಲಾಗಿದೆ. |
| 2 | ತು.ಶಾ.ಕಾ–ಪ್ಯಾಕೇಜ್–2 (10.00 ದಿಂದ 30.00 ಕಿ.ಮೀ) | | | | | | | | | |
| 3 | ತು.ಶಾ.ಕಾ–ಪ್ಯಾಕೇಜ್–3 (30.00 ದಿಂದ 47.00 ಕಿ.ಮೀ) | 377–14.08 | 9–01 | 386–15.08 | 386–15.08 | 0 | 251–19.04 | 0 | – | 14 ಗ್ರಾಮದ ಭೂಸ್ವಾಧೀನ ಪ್ರಸ್ತಾವನೆಯಲ್ಲಿ 10 ಗ್ರಾಮದ 19(1) &(2) ಅನುಮೊದನೆಗೊಂಡಿದ್ದು, 03 ಗ್ರಾಮದ 19(1) & (2) ಅನುಮೊದನೆಗೆ ಮತ್ತು 01 ಗ್ರಾಮದ ಆರ್&ಆರ್ ಪ್ರಸ್ತಾವನೆಯ ಅನುಮೋದನೆಯು |

| ಕ್ರ ಸಂ. | ಕಾಮಗಾರಿ | ಪ್ರಸ್ತಾಪಿತ ಸರಕಾರಿ ಮತ್ತು ಖಾಸಗಿ ಭೂಮಿ | | | 11(1) ಅಧಿಸೂಚನೆ ಆಗಿರುವ ಕ್ಷೇತ್ರ | 11(1) ಅಧಿಸೂಚನೆ ಆಗ ಬೇಕಾಗಿರುವ ಕ್ಷೇತ್ರ | 19(2) ಅಧಿಸೂಚನೆ ಯಾಗಿರುವ ಕ್ಷೇತ್ರ | ಅವಾರ್ಡ್ ಆಗಿರುವ ಕ್ಷೇತ್ರ | ಸ್ವಾಧೀನ ಪಡಿಸಿದ ದಿನಾಂಕ | ಷರಾ |
|---|---|---|---|---|---|---|---|---|---|---|
| | | ಖಾಸಗಿ | ಸರಕಾರಿ | ಒಟ್ಟು | ಎ-ಗುಂಟೆ | ಎ-ಗುಂಟೆ | ಎ-ಗುಂಟೆ | ಎ-ಗುಂಟೆ | | |
| | | ಎ-ಗುಂ | ಎ-ಗುಂ | ಎ-ಗುಂ | | | | | | |
| | | | | | | | | | | ಸರ್ಕಾರದ ಪರಿಶೀಲನೆಯಲ್ಲಿದೆ. |
| 4 | ತು.ಶಾ.ಕಾ-ಪ್ಯಾಕೇಜ್-4 (47.00 ದಿಂದ 61.00 ಕಿ.ಮೀ) | 218-06 | 10-13 | 228-19 | 228-19 | 0 | 46-37 | 0 | - | 06 ಗ್ರಾಮದ ಭೂಸ್ವಾಧೀನ ಪ್ರಸ್ತಾವನೆಯಲ್ಲಿ 02 ಗ್ರಾಮದ 19(1) &(2) ಅನುಮೊದನೆಗೊಂಡಿದ್ದು, 02 ಗ್ರಾಮದ 19(1) &(2) ಅನುಮೊದನೆ 01 ಗ್ರಾಮದ 19(1) &(2) ಪ್ರಸ್ತಾವನೆ ಪ್ರಗತಿಯಲ್ಲಿದೆ ಮತ್ತು 01 ಗ್ರಾಮದ ಆರ್&ಆರ್ ಪ್ರಸ್ತಾವನೆಯ ಅನುಮೋದನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |
| 5 | ತು.ಶಾ.ಕಾ-ಪ್ಯಾಕೇಜ್-5 (61.00 ದಿಂದ 84.00 ಕಿ.ಮೀ) | 376-19.16 | 44-20 | 420-39.16 | 420-39.16 | 0 | 0 | 0 | - | 10 ಗ್ರಾಮಗಳ ಭೂಸ್ವಾಧೀನ ಪ್ರಸ್ತಾವನೆಯಲ್ಲಿ 10 ಗ್ರಾಮದ 15(3) ಅನುಮೋದನೆಗೊಂಡಿದ್ದು, 04 ಗ್ರಾಮದ ಆರ್ & ಆರ್ ಪ್ರಸ್ತಾವನೆಯನ್ನು ಅನುಮೊದನೆಗೊಂಡಿದೆ. 06 ಗ್ರಾಮದ ಆರ್&ಆರ್ ಪ್ರಸ್ತಾವನೆಯ ಅನುಮೋದನೆಯು ಸರ್ಕಾರದ ಪರಿಶೀಲನೆಯಲ್ಲಿದೆ.. |
| 6 | ತು.ಶಾ.ಕಾ-ಪ್ಯಾಕೇಜ್-6 (84.00 ದಿಂದ 98.00 ಕಿ.ಮೀ) | 188-31 | 50-03 | 238-34 | 163-12 | 75-22 | 00-00 | 00-00 | - | ತುಮಕೂರು ಶಾಖಾ ಕಾಲುವೆ ಕಿಮೀ 97.00 ರಿಂದ 98.5 ರವರೆಗೆ ಪಂಕ್ತಿಕರಣ ಬದಲಾವಣೆ ಮಾಡಬೇಕಾಗಿರುವುದರಿಂದ ಹಾರೂಗೊಂಡನಹಳ್ಳಿಯ ಸರ್ವೆ ಕಾರ್ಯ ಮಾಡಬೇಕಾಗಿರುತ್ತದೆ. |
| 7 | ತು.ಶಾ.ಕಾ-ಪ್ಯಾಕೇಜ್-7 (98.00 ದಿಂದ 108.00 ಕಿ.ಮೀ) | 120-36 | 62-11 | 183-07 | 139-07 | 44-00 | 00-00 | 00-00 | - | ಎರಡು ಗುಡ್ಡದ ಸಂಧಿಕಾವಲು ಗ್ರಾಮದ 11(1) ಪ್ರಸ್ತಾವನೆಯು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಇವರಿಗೆ ಸಲ್ಲಿಸಲಾಗಿದೆ. |
| 8 | ತು.ಶಾ.ಕಾ-ಪ್ಯಾಕೇಜ್-8 (108.00 ದಿಂದ 135.00 ಕಿ.ಮೀ) | 475-31-12 | 00-00 | 475-31-12 | 75-04-12 | 400-27-00 | 00-00 | 00-00 | - | 02 ಗ್ರಾಮಗಳಿಗೆ JMC ನಿರ್ವಹಿಸಲು ಸಂಬಂದಿಸಿದ ಇಲಾಖೆಗಳಿಗೆ ಪತ್ರ ಕಳುಹಿಸಲಾಗಿದೆ ಮತ್ತು ಉಳಿದ 10 ಗ್ರಾಮಗಳ ಭೂಸ್ವಾಧೀನದ 11(1) ಪ್ರಸ್ತಾವನೆಗಳನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು, ಚಿತ್ರದುರ್ಗರವರಿಂದ ಜಿಲ್ಲಾಧಿಕಾರಿಗಳು ತುಮಕೂರು ಇವರಿಗೆ ಕಳುಹಿಸಲಾಗಿದೆ. |

| ಕ್ರ ಸಂ. | ಕಾಮಗಾರಿ | ಪ್ರಸ್ತಾಪಿತ ಸರಕಾರಿ ಮತ್ತು ಖಾಸಗಿ ಭೂಮಿ | | | 11(1) ಅಧಿಸೂಚನೆ ಆಗಿರುವ ಕ್ಷೇತ್ರ | 11(1) ಅಧಿಸೂಚನೆ ಆಗ ಬೇಕಾಗಿರುವ ಕ್ಷೇತ್ರ | 19(2) ಅಧಿಸೂಚನೆ ಯಾಗಿರುವ ಕ್ಷೇತ್ರ | ಅವಾರ್ಡ್ ಆಗಿರುವ ಕ್ಷೇತ್ರ | ಸ್ವಾಧೀನ ಪಡಿಸಿದ ದಿನಾಂಕ | ಷರಾ |
|---|---|---|---|---|---|---|---|---|---|---|
| | | ಖಾಸಗಿ | ಸರಕಾರಿ | ಒಟ್ಟು | ಎ–ಗುಂಟೆ | ಎ–ಗುಂಟೆ | ಎ–ಗುಂಟೆ | ಎ–ಗುಂಟೆ | | |
| | | ಎ–ಗುಂ | ಎ–ಗುಂ | ಎ–ಗುಂ | | | | | | |
| 9 | ತು.ಶಾ.ಕಾ– ಪ್ಯಾಕೇಜ್–9 (135.00 ದಿಂದ 159.684 ಕಿ.ಮೀ) | 445–02–08 | 00–00 | 445–02–08 | 137–26–00 | 307–16–08 | 00–00 | 00–00 | – | 05 ಗ್ರಾಮಗಳಿಗೆ JMC ನಿರ್ವಹಿಸಲು ಸಂಬಂದಿಸಿದ ಇಲಾಖೆಗಳಿಗೆ ಪತ್ರ ಕಳುಹಿಸಲಾಗಿದೆ ಉಳಿದ 02 ಗ್ರಾಮಗಳಲ್ಲಿ 01 ಗ್ರಾಮದ ಭೂಸ್ವಾಧೀನದ 11(1) ಪ್ರಸ್ತಾವನೆಗಳನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು, ಚಿತ್ರದುರ್ಗರವರಿಗೆ ಸಲ್ಲಿಸಲಾಗಿದೆ. ಇನ್ನುಳಿದ 01 ಗ್ರಾಮದ ಬುಸ್ವಾಧೀನ 11(1) ಪ್ರಸ್ತಾವನೆಯು ತಯಾರಿಕಾ ಹಂತದಲ್ಲಿರುತ್ತದೆ. |
| ಒಟ್ಟು | | | | **2980–22.08** | **2081–26.76** | **898.35.32** | **757–34.16** | **00–00** | | |

## ಅನುಬಂಧ–2

| ಕ್ರಸಂ | ಪ್ಯಾಕೇಜ್ | ನಿರ್ವಹಿಸ ಬೇಕಾದ ಕಾಲುವೆ ಉದ್ದ (ಕಿ.ಮೀ) | ಟೆಂಡರ್ ಕರೆದ ದಿನಾಂಕ | ಇಲ್ಲಿಯವರೆಗೂ ಅಗಿರುವ ಕಾಲುವೆ ಅಗೆತದ ಉದ್ದ (ಕಿ.ಮೀ) | ಇಲ್ಲಿಯವರೆಗೂ CBL ವರೆಗೆ ಅಗಿರುವ ಕಾಲುವೆ ಅಗೆತದ ಉದ್ದ | ಬಾಕಿ ಇರುವ ಕಾಲುವೆ ಉದ್ದ | ನಿಗಧಿ ಪಡಿಸಲಾದ ಕಾಲಾವಧಿ | ಷರಾ |
|---|---|---|---|---|---|---|---|---|
| 01 | ಟಿಬಿಸಿ ಪ್ಯಾ–1 (0.00 ದಿಂದ 10.00 ಕಿ.ಮೀ) | 10.00 | 24.07.2017 | 0.76 | 0.76 | 9.24 | 31.03.2021 | ಕಾಮಗಾರಿ ಪ್ರಗತಿಯಲ್ಲಿವೆ. |
| 02 | ಟಿಬಿಸಿ ಪ್ಯಾ–2 (10.00 ದಿಂದ 30.00 ಕಿ.ಮೀ) | 20.00 | 24.07.2017 | 4.00 | 1.80 | 16.00 | 08.03.2021 | ಕಾಮಗಾರಿ ಪ್ರಗತಿಯಲ್ಲಿವೆ. |
| 03 | ಟಿಬಿಸಿ ಪ್ಯಾ–3 (30.00 ದಿಂದ 47.00 ಕಿ.ಮೀ) | 17.00 | 05.02.2018 | 4.955 | 1.27 | 12.045 | 02.07.2021 | (ದಿನಾಂಕ:03.07.2020–ದಿನಾಂಕ:02.07.2021 ರವರೆಗೆ ಕಾಲಾವಧಿ ವಿಸ್ತರಣಾ ಪ್ರಸ್ತಾವನೆಯನ್ನು ಅನುಮೋದನೆಗೆ ಸಲ್ಲಿಸಿದ್ದು, TSC ಯಲ್ಲಿ ತೀರುವಳಿ ದೊರೆತಿರುತ್ತದೆ.) ಕಾಮಗಾರಿ ಪ್ರಗತಿಯಲ್ಲಿವೆ. |
| 04 | ಟಿಬಿಸಿ ಪ್ಯಾ–4 (47.00 ದಿಂದ 61.00 ಕಿ.ಮೀ) | 14.00 | 03.12.2018 | 3.733 | – | 10.267 | 16.11.2021 | ಕಾಮಗಾರಿ ಪ್ರಗತಿಯಲ್ಲಿವೆ. (ದಿನಾಂಕ:17.11.2020–ದಿನಾಂಕ:16.11.2021 ರವರೆಗೆ ಕಾಲಾವಧಿ ವಿಸ್ತರಣಾ ಪ್ರಸ್ತಾವನೆಯನ್ನು ಅನುಮೋದನೆಗೆ ಸಲ್ಲಿಸಿದ್ದು, ತೀರುವಳಿ ದೊರೆತಿರುತ್ತದೆ.) |
| 05 | ಟಿಬಿಸಿ ಪ್ಯಾ–5 (61.00 ದಿಂದ 84.00 ಕಿ.ಮೀ) | 23.00 | 03.12.2018 | 8.75 | – | 14.25 | 16.05.2021 | ಕಾಮಗಾರಿ ಪ್ರಗತಿಯಲ್ಲಿವೆ. |
| 6 | ಟಿಬಿಸಿ ಪ್ಯಾಕೇಜ್–6 (84.00 ದಿಂದ 98.00 ಕಿ.ಮೀ) | 14 | 03.12.2018 | 7.57 | 7.57 | 6.43 | 30.08.2021 | ಕಾಮಗಾರಿ ಪ್ರಗತಿಯಲ್ಲಿವೆ. (ದಿನಾಂಕ:08.09.2020 ರಿಂದ ದಿನಾಂಕ:30.08.2021 ರವರೆಗೆ ಕಾಲಾವಧಿ ವಿಸ್ತರಣಾ ಪ್ರಸ್ತಾವನೆಯನ್ನು ಅನುಮೋದನೆಗೆ ಸಲ್ಲಿಸಿದ್ದು, ಪರಿಶೀಲನಾ ಹಂತದಲ್ಲಿರುತ್ತದೆ) |

| ಕ್ರಸಂ | ಪ್ಯಾಕೇಜ್ | ನಿರ್ವಹಿಸ ಬೇಕಾದ ಕಾಲುವೆ ಉದ್ದ (ಕಿ.ಮೀ) | ಟೆಂಡರ್ ಕರೆದ ದಿನಾಂಕ | ಇಲ್ಲಿಯವರೆಗೂ ಅಗಿರುವ ಕಾಲುವೆ ಅಗೆತದ ಉದ್ದ (ಕಿ.ಮೀ) | ಇಲ್ಲಿಯವರೆಗೂ CBL ವರೆಗೆ ಅಗಿರುವ ಕಾಲುವೆ ಅಗೆತದ ಉದ್ದ | ಬಾಕಿ ಇರುವ ಕಾಲುವೆ ಉದ್ದ | ನಿಗಧಿ ಪಡಿಸಲಾದ ಕಾಲಾವಧಿ | ಷರಾ |
|---|---|---|---|---|---|---|---|---|
| 7 | ಟಿಬಿಸಿ ಪ್ಯಾಕೇಜ್–7 (98.00 ದಿಂದ 108.00 ಕಿ.ಮೀ) | 10 | 03.12.2018 | 1.84 | 0.5 | 8.16 | 28.02.2022 | ಕಾಮಗಾರಿ ಪ್ರಗತಿಯಲ್ಲಿವೆ. (ದಿನಾಂಕ:09.11.2020 ರಿಂದ ದಿನಾಂಕ:08.02.2022 ರವರೆಗೆ ಕಾಲಾವಧಿ ವಿಸ್ತರಣಾ ಪ್ರಸ್ತಾವನೆಯನ್ನು ಅನುಮೋದನೆಗೆ ಸಲ್ಲಿಸಿದ್ದು, ಪರಿಶೀಲನಾ ಹಂತದಲ್ಲಿರುತ್ತದೆ) |
| 8 | ಪ್ಯಾಕೇಜ್–8 (108.00 ದಿಂದ 135.00 ಕಿ.ಮೀ) | 27.00 | 25.09.2019 | 1.25 | 0.75 | 25.75 | 06.07.2021 | ಕಾಮಗಾರಿ ಪ್ರಗತಿಯಲ್ಲಿವೆ. |
| 9 | ಪ್ಯಾಕೇಜ್–9 (135.00 ದಿಂದ 159.684 ಕಿ.ಮೀ) | 24.684 | 25.09.2019 | 5.8 | 3.5 | 18.884 | 07.07.2021 | ಕಾಮಗಾರಿ ಪ್ರಗತಿಯಲ್ಲಿವೆ. |

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1240
2. ಸದಸ್ಯರ ಹೆಸರು : ಶ್ರೀ ಕುಮಾರಸ್ವಾಮಿ ಹೆಚ್.ಕೆ.
3. ಉತ್ತರಿಸಬೇಕಾದ ದಿನಾಂಕ : 09-03-2021

<table>
<tr><th>ಕ್ರ ಸಂ</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ</td><td>ಜುಲೈ 2019 ನೇ ಸಾಲಿನಿಂದ ಈ ದಿನಾಂಕದವರೆಗೆ ಹೇಮಾವತಿ ಯೋಜನಾ ವಲಯ ಗೊರೂರು ವ್ಯಾಪ್ತಿಯಲ್ಲಿ ಬರುವ ವಿಭಾಗಗಳಿಗೆ ಹಣ ಭರವಸೆ ಪತ್ರವನ್ನು ವಿಭಾಗವಾರು ಬಿಡುಗಡೆ ಮಾಡಿರುವ ಸಂಪೂರ್ಣ ಮಾಹಿತಿಯನ್ನು ನೀಡುವುದು;</td><td>ಜುಲೈ 2019 ರಿಂದ ಫೆಬ್ರವರಿ 2021ರ ಅಂತ್ಯದವರೆಗೆ ಹೇಮಾವತಿ ಯೋಜನಾ ವಲಯ, ಗೊರೂರು ವ್ಯಾಪ್ತಿಯಲ್ಲಿ ಬರುವ ಒಟ್ಟು 9 ವಿಭಾಗಗಳ ಕಾಮಗಾರಿಗಳಿಗಾಗಿ ಹಣ ಭರವಸೆ ಪತ್ರವನ್ನು ವಿಭಾಗವಾರು ಬಿಡುಗಡೆ ಮಾಡಿದ ವಿವರಗಳು ಈ ಕೆಳಕಂಡಂತಿವೆ :<br>
(ರೂ. ಕೋಟಿಗಳಲ್ಲಿ)
<table>
<tr><th>ಕ್ರ ಸಂ</th><th>ವಿಭಾಗಗಳ ಹೆಸರು</th><th>ಜುಲೈ 2019 ರಿಂದ ಫೆಬ್ರವರಿ 2021ರವರೆಗೆ ಬಿಡುಗಡೆ ಮಾಡಿದ ಮೊತ್ತ</th></tr>
<tr><td>1</td><td>ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು</td><td>191.14</td></tr>
<tr><td>2</td><td>ನಂ.1, ಹೇಮಾವತಿ ಬಲಮೇಲ್ದಂಡೆ ನಾಲಾ ವಿಭಾಗ, ಗೊರೂರು</td><td>268.17</td></tr>
<tr><td>3</td><td>ಹೇಮಾವತಿ ಬಲದಂಡೆ ನಾಲಾ ವಿಭಾಗ, ಹೊಳೆನರಸೀಪುರ</td><td>332.13</td></tr>
<tr><td>4</td><td>1ನೇ ಹೇಮಾವತಿ ಎಡೆದಂಡೆ ನಾಲಾ ವಿಭಾಗ, ಚನ್ನರಾಯಪಟ್ಟಣ</td><td>620.61</td></tr>
<tr><td>5</td><td>ಯಗಚಿ ಯೋಜನಾ ವಿಭಾಗ, ಬೇಲೂರು</td><td>23.51</td></tr>
<tr><td>6</td><td>ನಂ.3 ಹೇಮಾವತಿ ಎಡದಂಡೆ ನಾಲಾ ವಿಭಾಗ, ಕೃಷ್ಣರಾಜಪೇಟೆ</td><td>54.00</td></tr>
<tr><td>7</td><td>ನಂ.6 ಹೇಮಾವತಿ ಎಡದಂಡೆ ನಾಲಾ ವಿಭಾಗ, ಪಾಂಡವಪುರ</td><td>39.16</td></tr>
<tr><td>8</td><td>ನಂ.7 ಹೇಮಾವತಿ ಎಡದಂಡೆ ನಾಲಾ ವಿಭಾಗ, ನಾಗಮಂಗಲ</td><td>9.48</td></tr>
<tr><td>9</td><td>ಗುಣ ನಿಯಂತ್ರಣ ವಿಭಾಗ ಗೊರೂರು.</td><td>0.20</td></tr>
<tr><td></td><td>ಒಟ್ಟು :-</td><td>1538.40</td></tr>
</table></td></tr>
<tr><td>ಆ</td><td>ಜುಲೈ 2019 ನೇ ಸಾಲಿನಿಂದ ಈ ದಿನಾಂಕದವರೆಗೆ ಹೇಮಾವತಿ ಯೋಜನಾ ವಲಯ ಗೊರೂರು ವ್ಯಾಪ್ತಿಯಲ್ಲಿ ವಿಭಾಗ ಕಛೇರಿಗಳಿಂದ ಗುತ್ತಿಗೆದಾರರಿಗೆ ಪಾವತಿಸಿರುವ ಹಣವೆಷ್ಟು; ವಿಭಾಗವಾರು ಮತ್ತು ಕಾಮಗಾರಿವಾರು ಗುತ್ತಿಗೆದಾರರಿಗೆ ಪಾವತಿಸಿರುವ ಬಿಲ್ಲುಗಳ ಸಂಪೂರ್ಣ ಮಾಹಿತಿ ನೀಡುವುದು;</td><td>ಹೇಮಾವತಿ ಯೋಜನಾ ವಲಯ, ಗೊರೂರು ವ್ಯಾಪ್ತಿಯಲ್ಲಿನ ರೂ.5.00 ಕೋಟಿಗೂ ಮೇಲ್ಪಟ್ಟ ವಿಭಾಗವಾರು ಪ್ರಮುಖ ಕಾಮಗಾರಿಗಳ ಗುತ್ತಿಗೆದಾರರಿಗೆ ಹಣ ಪಾವತಿಸಿರುವ ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ.</td></tr>
<tr><td>ಇ</td><td>ಜುಲೈ 2019 ನೇ ಸಾಲಿನಿಂದ ಈ ದಿನಾಂಕದವರೆಗೆ ಹೇಮಾವತಿ ಯೋಜನಾ ವಲಯ ಗೊರೂರು ವ್ಯಾಪ್ತಿಯಲ್ಲಿ ಬರುವ ವಿಭಾಗಳಿಗೆ ಹಣ ಭರವಸೆ ಪತ್ರ ನೀಡಲು ಆರ್ಥಿಕ</td><td>ಹಣ ಭರವಸೆ ಪತ್ರದ ಆದೇಶದಲ್ಲಿ ಬಿಡುಗಡೆಯಾದ ಅನುದಾನವನ್ನು ಅನುಮೋದಿತ ಯೋಜನೆಗಳಿಗೆ ಮಾತ್ರ ವಿನಿಯೋಗಿಸತಕ್ಕದ್ದು ಎಂಬ ಷರತ್ತನ್ನು ವಿಧಿಸಿದ್ದು, ಅದರಂತೆ ಅನುಮೋದನೆಗೊಂಡ ಯೋಜನೆಗಳಿಗೆ ಮಾತ್ರ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ ಹಾಗೂ ಸದರಿ ಮಾನದಂಡವನ್ನು ಅನುಸರಿಸದೇ ಉಲ್ಲಂಘಿಸಿರುವ ಪ್ರಕರಣಗಳು ಯಾವುದೂ ಇರುವುದಿಲ್ಲವಾದ್ದರಿಂದ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ.</td></tr>
</table>

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| | ಇಲಾಖೆಯು ನಿಗಧಿಪಡಿಸಿರುವ ಮಾನದಂಡಗಳನ್ನು ಕಾವೇರಿ ನೀರಾವರಿ ನಿಗಮದಲ್ಲಿ ಪಾಲಿಸಲಾಗುತ್ತಿದೆಯೇ; ಪಾಲಿಸದೇ ಇದ್ದಲ್ಲಿ ಅಂತಹ ಅಧಿಕಾರಿಗಳ ವಿರುದ್ಧ ಕೈಗೊಂಡಿರುವ ಕ್ರಮಗಳೇನು; | |
| ಈ | ಏತ ನೀರಾವರಿ ಯೋಜನೆಗಳ ಕಾಮಗಾರಿಗಳನ್ನು ನಿರ್ವಹಿಸುತ್ತಿರುವ ಗುತ್ತಿಗೆದಾರರಿಗೆ ಹಣ ಪಾವತಿ ಮಾಡುವಾಗ ಕೇವಲ ಪೈಪುಗಳ ಸರಬರಾಜಿಗೆ ಮಾತ್ರವೇ ಪ್ರಪ್ರಥಮವಾಗಿ ಸಂಪೂರ್ಣ ಹಣ ಪಾವತಿ ಮಾಡಿ, ಇನ್ನಿತರೆ ಅವಶ್ಯಕ ಕಾಮಗಾರಿಗಳಾದ ಜಾಕ್‌ವೆಲ್, ಪಂಪ್‌ಹೌಸ್ ಇತ್ಯಾದಿ ಕಾಮಗಾರಿಗಳನ್ನು ಗುತ್ತಿಗೆ ಕರಾರಿನ ನಿಗದಿತ ಅವಧಿಯೊಳಗೆ ನಿರ್ವಹಿಸದೇ ವಿಳಂಬವಾಗಿ ಕಾರ್ಯಗತಗೊಳಿಸುತ್ತಿರುವ ಕಾಮಗಾರಿಗಳ ಸಂಪೂರ್ಣ ಮಾಹಿತಿ ನೀಡುವುದು? | ➢ ಏತ ನೀರಾವರಿ ಯೋಜನೆಗಳಲ್ಲಿ ಪೈಪುಗಳ ಅಳವಡಿಕೆ, ಜಾಕ್‌ವೆಲ್, ಪಂಪ್‌ಹೌಸ್‌ಗಳ ನಿರ್ಮಾಣ ಹಾಗೂ ಎಲೆಕ್ಟ್ರೋ ಮೆಕ್ಯಾನಿಕಲ್ ಉಪಕರಣಗಳ ಅಳವಡಿಕೆ ಇತ್ಯಾದಿಯಂತೆ ಐಟಂಗಳಿದ್ದು, ಟೆಂಡರ್ ನಿಯಮಾನುಸಾರ ಗುತ್ತಿಗೆದಾರರಿಗೆ ವಹಿಸಿಕೊಡಲಾಗಿದೆ.<br>➢ ಕಾಮಗಾರಿಗೆ ಸಂಬಂಧಿಸಿದ ಜಾಕ್‌ವೆಲ್ ಹಾಗೂ ಪಂಪ್‌ಹೌಸ್‌ಗಳ ನಿರ್ಮಾಣಕ್ಕೆ ಮತ್ತು ಪೈಪುಗಳ, ಎಲೆಕ್ಟ್ರೋ ಮೆಕ್ಯಾನಿಕಲ್ ಉಪಕರಣಗಳ ಅಳವಡಿಕೆಗಾಗಿ ಕಾವೇರಿ ನೀರಾವರಿ ನಿಗಮದ ತಾಂತ್ರಿಕ ಸಮಾಲೋಚಕರಿಂದ ಪರಿಶೀಲನೆಗೊಳಪಡಿಸಿ ನಂತರ ಅಧೀಕ್ಷಕ ಅಭಿಯಂತರರು (ವಿನ್ಯಾಸ) ರವರಿಂದ ಸಹಮತಿ ಪಡೆದು ನಿಗಮದಿಂದ ಅನುಮೋದನೆ ನೀಡಲಾಗುತ್ತಿದೆ.<br>➢ ಗುತ್ತಿಗೆದಾರರು ಪೈಪುಗಳನ್ನು ಖರೀದಿಸಿ, ಗುಣ ನಿಯಂತ್ರಣ ಪರೀಕ್ಷೆಗೊಳಪಡಿಸಿ Quality Assurance planಗೆ ನಿಗಮದಿಂದ ಅನುಮೋದನೆ ಪಡೆದುಕೊಂಡ ನಂತರವೇ ಅನುಷ್ಠಾನಾಧಿಕಾರಿಗಳಾದ ಕಾರ್ಯಪಾಲಕ ಇಂಜನಿಯರ್‌ರವರುಗಳಿಗೆ ಟೆಂಡರ್ ನಿಯಮಾವಳಿ ಪ್ರಕಾರ ಹಾಗೂ ಕಾಮಗಾರಿಯ Bar chart ಕಾರ್ಯಕ್ರಮ ಪಟ್ಟಿಯಂತೆ ಕ್ರಮವಹಿಸಿ ಗುತ್ತಿಗೆದಾರರಿಗೆ ಬಿಲ್ಲನ್ನು ಪಾವತಿಸಲು ಸೂಚಿಸಲಾಗುತ್ತಿದೆ.<br>➢ ಕೆಲವು ಏತ ನೀರಾವರಿ ಯೋಜನೆಗಳಿಗೆ ಬೇಕಾಗುವ ಜಮೀನಿನ ಭೂಸ್ವಾಧೀನ ಸಮಸ್ಯೆಯಿಂದ ಕಾಮಗಾರಿಯು ವಿಳಂಬವಾಗುತ್ತಿದ್ದು, ಈ ಸಮಸ್ಯೆಯನ್ನು ಬಗೆಹರಿಸಿ ಯೋಜನೆಗೆ ಬೇಕಾದ ಜಮೀನನ್ನು ಭೂಸ್ವಾಧೀನ ಪಡಿಸಿಕೊಂಡು ತ್ವರಿತವಾಗಿ ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಕ್ರಮವಹಿಸಲಾಗುತ್ತಿದೆ. |

***ಸಂಖ್ಯೆ:ಜಸಂಇ 47 ಎಸ್‌ಎಲ್‌ಎ 2021***

ಬಿ.ಎಸ್ (signature)

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

**ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1240 ಕ್ಕೆ ಅನುಬಂಧ**

(ರೂ. ಕೋಟಿಗಳಲ್ಲಿ)

| ಕ್ರ ಸಂ | ವಿಭಾಗದ ಹೆಸರು | ಗುತ್ತಿಗೆದಾರರ ಹೆಸರು | ಪ್ರಮುಖ ಕಾಮಗಾರಿಯ ಹೆಸರು | ಕಾಮಗಾರಿಯ ಗುತ್ತಿಗೆ ಮೊತ್ತ | ಜುಲೈ 2019ರಿಂದ ಫೆಬ್ರವರಿ 2021ರವರೆಗೆ ಪಾವತಿಸಿರುವ ಬಿಲ್ಲಿನ ಮೊತ್ತ |
|---|---|---|---|---|---|
| 1 | ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು | ಉದಯ ಶಿವಕುಮಾರ್ | 1) ಹೇಮಾವತಿ ನದಿಗೆ ಅಡ್ಡಲಾಗಿ ಸಿರಿಗಾವರ ಹತ್ತಿರ ಸೇತುವೆ ನಿಮಾಣ | 10.04 | 0.49 |
| | | ಪಿ.ಡಿ.ಆರ್. ಕನ್‌ಸ್ಟ್ರಕ್ಷನ್ಸ್ ಲಿಮಿಟೆಡ್ | 2)ಕಾಮಸಮುದ್ರ ಶಾಖಾ ನಾಲೆ ಸರಪಳಿ: 5 ಕಿ.ಮೀ ನಿಂದ 35 ಕಿ.ಮೀವರೆಗೆ (ಯಗಟಿ ಎಡದಂಡೆ ಶಾಖಾ ನಾಲೆ) ಮಣ್ಣಿನ ಅಗೆತ ಸಿ.ಡಿ. ಕಾಮಗಾರಿಗಳ ನಿರ್ಮಾಣ ಹಾಗೂ ಸಿಮೆಂಟ್ ಕಾಂಕ್ರೀಟ್ ಒಳಗೊಂಡಂತೆ | 71.08 | 8.80 |
| | | ಎಂ.ವೈ. ಕಟ್ಟೀಮನಿ | 3) ಹೇಮಾವತಿ ಎಡದಂಡೆ ನಾಲೆಯ ಸರಪಳಿ 0.00 ಕಿ.ಮೀ ನಿಂದ 71.62 ಕಿ.ಮೀವರೆಗೆ ಮತ್ತು ಬಿ.ಎನ್.ಟಿ. ಅಪ್ರೋಚ್ ನಾಲೆ 0.00 ಕಿ.ಮೀ ಇಂದ 5.57 ಕಿ.ಮೀವರೆಗೆ ಆಧುನೀಕರಣ ಕಾಮಗಾರಿ. | 762.42 | 20.23 |
| 2 | ನಂ.1, ಹೇಮಾವತಿ ಬಲಮೇಲ್ದಂಡೆ ನಾಲಾ ವಿಭಾಗ, ಗೊರೂರು | ಅಮೃತ ಕನ್‌ಸ್ಟ್ರಕ್ಷನ್ಸ್ ಪ್ರೈ.ಲಿ. ಬೆಂಗಳೂರು | 4) ಹೇಮಾವತಿ ನದಿಯಿಂದ ಅರಕಲಗೂಡು ತಾಲ್ಲೂಕಿನ ಗಂಗನಾಳು ಅಕ್ಕಪಕ್ಕದ 42 ಗ್ರಾಮಗಳಿಗೆ 88 ಕೆರೆಗಳಿಗೆ ಕುಡಿಯುವ ನೀರು ತುಂಬಿಸುವ ಯೋಜನೆ. | 33.49 | 32.50 |
| | | ಮೆ॥ ಎ.ಸಿ.ಪಿ.ಎಲ್-ಎಸ್.ಪಿ.ಎಂ.ಎಲ್. ಇನ್‌ಪ್ರಾ ಲಿ. | 5) ಹೇಮಾವತಿ ನದಿಯಿಂದ ನೀರನ್ನು ಎತ್ತಿ ಬೇವಿನಹಳ್ಳಿಯಿಂದ ರಂಗೇನಹಳ್ಳಿ ಮತ್ತು ಇತರೆ 22 ಕೆರೆಗಳಿಗೆ ಕುಡಿಯುವ ನೀರು ತುಂಬಿಸುವ ಯೋಜನೆ. | 43.45 | 19.45 |
| | | ಬಿ.ಎಸ್.ಆರ್. ಇನ್‌ಪ್ರಾಟೆಕ್ ಇಂಡಿಯಾ ಲಿ. | 6) ಹೇಮಾವತಿ ಬಲಮೇಲ್ದಂಡೆ ನಾಲೆಯ ಸರಪಳಿ:0.00 ಕಿ.ಮೀ ನಿಂ 96.812 ಕಿ.ಮೀ ವರೆಗೆ ನಾಲಾ ಆಧುನೀಕರಣ ಕಾಮಗಾರಿ. | 379.55 | 186.66 |
| | | ಹೆಚ್.ಸಿ. ಉಮೇಶ | 7) ಕೆ.ಆರ್. ನಗರ ತಾಲ್ಲೂಕಿನ ಅಡಿಯಲ್ಲಿ ಬರುವ ಮುಕ್ಕನಹಳ್ಳಿ ಕೆರೆಯಿಂದ 24 ಕೆರೆಗಳಿಗೆ ಕುಡಿಯುವ ನೀರು ಯೋಜನೆ. | 6.23 | 5.37 |
| 3 | ಹೇಮಾವತಿ ಬಲದಂಡೆ ನಾಲಾ ವಿಭಾಗ, ಹೊಳೆನರಸೀಪುರ | ಮೆ॥ ಆಡು ಇನ್‌ಪ್ರಾ (ಶ್ರೀ ಅರುಣಕುಮಾರ್ ಡಿ. ಬಂಡಿ) | 8) ಹೊಳೆನರಸೀಪುರ ತಾಲ್ಲೂಕು ಮಾವಿನಕೆರೆ ಗ್ರಾಮದ ಸಮೀಪ ಹೇಮಾವತಿ ನದಿಯಿಂದ ನೀರನ್ನು ಎತ್ತಿ ಹಾಸನ ತಾಲ್ಲೂಕು ಕುಡಿಯುವ ನೀರಿಗಾಗಿ 160 ಕೆರೆಗಳಿಗೆ ನೀರು ತುಂಬಿಸುವ ಹಾಸನ ತಾಲ್ಲೂಕಿನ ದುದ್ದ, ಶಾಂತಿಗ್ರಾಮ ಹಾಗೂ ಹೊಳೆನರಸೀಪುರ ತಾಲ್ಲೂಕಿನ ಹಳೇಕೋಟೆ ಹೋಬಳಿಗಳಲ್ಲಿ ಬರುವ ಒಣಕೆರೆಗಳಿಗೆ ನೀರನ್ನು ತುಂಬಿಸುವ ಯೋಜನೆ | 359.33 | 80.72 |
| | | ಮೆ॥ ಶಂಕರ ನಾರಾಯಣ ಕನ್‌ಸ್ಟ್ರಕ್ಷನ್ಸ್ ಪ್ರೈ.ಲಿ. | 9) ಹೊಳೆನರಸೀಪುರ ತಾಲ್ಲೂಕಿನ ಕಟ್ಟೆಬೆಳಗುಲಿ ಗ್ರಾಮದ ಸಮೀಪ ಶ್ರೀ ರಾಮದೇವರ ಅಣೆಕಟ್ಟೆಯ ಪುನರ್ ನಿರ್ಮಾಣ ಕಾಮಗಾರಿ | 128.70 | 55.19 |

| ಕ್ರ ಸಂ | ವಿಭಾಗದ ಹೆಸರು | ಗುತ್ತಿಗೆದಾರರ ಹೆಸರು | ಪ್ರಮುಖ ಕಾಮಗಾರಿಯ ಹೆಸರು | ಕಾಮಗಾರಿಯ ಗುತ್ತಿಗೆ ಮೊತ್ತ | ಜುಲೈ 2019ರಿಂದ ಫೆಬ್ರವರಿ 2021ರವರೆಗೆ ಪಾವತಿಸಿರುವ ಬಿಲ್ಲಿನ ಮೊತ್ತ |
|---|---|---|---|---|---|
| | | ಹೆಚ್.ಸಿ. ಉಮೇಶ್ | 10) ಹೊಳೆನರಸೀಪುರ ತಾಲ್ಲೂಕಿನ ಅಡಿಯಲ್ಲಿ ಬರುವ ಶ್ರೀರಾಮದೇವರ ನಾಲಾ ಅಚ್ಚುಕಟ್ಟು ಪ್ರದೇಶದಲ್ಲಿ ವಂಚಿತ ಅಚ್ಚುಕಟ್ಟು ಪ್ರದೇಶಗಳಿಗೆ ತಟ್ಟೇಕೆರೆ ಏತ ನೀರಾವರಿ ಯೋಜನೆಯ ಪುನರ್‌ಜೀವನ್ ಭರಿಸುವ ಕೆಲಸ ಒಂಟಿಗುಡ್ಡ ಏತನೀರಾವರಿ ಯೋಜನೆಯ ಪುನರ್‌ಜೀವನಗೊಳಿಸುವ ಕಾಮಗಾರಿ ಕಾಮಸಮುದ್ರ ಏತನೀರಾವರಿ ಯೋಜನೆಯ ಅಡಿಯಲ್ಲಿ ಬರುವ 13ನೇ ಕಿ.ಮೀನಲ್ಲಿ ಮುತ್ತಿಗೆ ಹಿರೇಹಳ್ಳಿ ಫೀಡರ್ ಕೆನಾಲ್ ನಿರ್ಮಾಣ ಕಾಮಗಾರಿ. | 11.84 | 6.41 |
| | | ಮೆ॥ ಸ್ಟಾರ್ ಇನ್ಫ್ರಾಟೆಕ್ | 11) ಹೇಮಾವತಿ ಬಲದಂಡೆ ನಾಲಾ ಸರಪಳಿ 0.00 ಕಿ.ಮೀ.ನಿಂದ 92.104 ಕಿ.ಮೀ. ವರೆಗಿನ ಆಧುನೀಕರಣ ಕಾಮಗಾರಿ | 417.50 | 109.26 |
| 4 | ಯಗಚಿ ಯೋಜನಾ ವಿಭಾಗ, ಬೇಲೂರು | ಶ್ರೀನಿವಾಸ ಇಂಡಿಯಾ ಪ್ರೈ. ಲಿಮಿಟೆಡ್ | 12) ಹಳೇಬೀಡು-ಮಾದೀಹಳ್ಳಿ ಏತ ನೀರಾವರಿಯಿಂದ ಕುಡಿಯುವ ನೀರಿಗಾಗಿ 39 ಕೆರೆಗಳನ್ನು ತುಂಬಿಸುವ ಕಾಮಗಾರಿ | 11.65 | 0.00 |
| | | ಸಿ.ಎನ್. ಸೋಮಶೇಖರ್ | 13) ಕ್ಯಾತನಹಳ್ಳಿ ಮೊದಲನೇ ಹಂತದ ಏತ ನೀರಾವರಿ ಯೋಜನೆ | 11.40 | 0.00 |
| | | ಪಿಚ್‌ಲಾಲ್ ವೆಂಕಟೇಶ್ವರರಾವ್ | 14) ಕ್ಯಾತನಹಳ್ಳಿ ಏತ ನೀರಾವರಿ ಯೋಜನೆಯ 2ನೇ ಹಂತದ ಸಿ.ಡಿ. ಕಾಮಗಾರಿಗಳ ಮಣ್ಣ ಅಗೆತ ಕೆಲಸ ಮತ್ತು ಪಂಪ್ ಮತ್ತು ಮಿಷನರಿಗಳ ಎಲೆಕ್ಟ್ರಿಕಲ್ ಕಾಮಗಾರಿಗಳು | 8.09 | 0.53 |
| 5 | ನಂ.1, ಹೇಮಾವತಿ ಎಡದಂಡೆ ನಾಲಾ ವಿಭಾಗ, ಚನ್ನರಾಯಪಟ್ಟಣ | ಮೆ॥ ಶ್ರೀ ಶ್ರೀನಿವಾಸ ಕನ್‌ಸ್ಟ್ರಕ್ಷನ್ಸ್ ಇಂಡಿಯಾ ಪ್ರೈ.ಲಿ. | 15) ಚನ್ನರಾಯಪಟ್ಟಣ ತಾಲ್ಲೂಕಿನ ಬಿ.ಎನ್.ಟಿ. ಅಪ್ರೋಚ್ ಏತ ನೀರಾವರಿ ಯೋಜನೆ ನುಗ್ಗೇಹಳ್ಳಿ ಹೋಬಳಿಯ ಕೆರೆಗಳಿಗೆ ನೀರನ್ನು ತುಂಬಿಸುವ ಕಾಮಗಾರಿ. | 6.15 | 0.00 |
| | | ಮೆ॥ ಎಸ್.ಆರ್.ಸಿ.ಎಲ್. ಲಿಮಿಟೆಡ್ | 16) ಚನ್ನರಾಯಪಟ್ಟಣ ತಾಲ್ಲೂಕಿನ ಹಿರಿಸಾವೆ-ಶ್ರವಣಬೆಳಗುಳ ಹೋಬಳಿಯಲ್ಲಿ ಬರುವ ಕೆರೆಗಳಿಗೆ ಏತ ನೀರಾವರಿ ಮೂಲಕ ನೀರು ತುಂಬಿಸುವ ಕಾಮಗಾರಿ. | 25.37 | 4.53 |
| | | ಓಷನ್ ಕನ್‌ಸ್ಟ್ರಕ್ಷನ್ಸ್ ಇಂಡಿಯಾ ಪ್ರೈ.ಲಿ. | 17) ಚನ್ನರಾಯಪಟ್ಟಣ ತಾಲ್ಲೂಕಿನ ಅಮಾನಿಕೆರೆಯಿಂದ 25 ಸಂಖ್ಯೆ ಕೆರೆಗಳಿಗೆ ನೀರು ತುಂಬಿಸುವ ಕಾಮಗಾರಿ. | 64.89 | 18.72 |
| | | ಅಮೃತ್ ಕನ್‌ಸ್ಟ್ರಕ್ಷನ್ ಪ್ರೈ.ಲಿ. & ಶ್ರೀ ಎಸ್. ನಾರಾಯಣರೆಡ್ಡಿ | 18) ಚನ್ನರಾಯಪಟ್ಟಣ ತಾಲ್ಲೂಕಿನ ಆನೆಕೆರೆ-ಶಂಭುದೇವರ ಕೆರೆಯಿಂದ 26 ಕೆರೆಗಳಿಗೆ ನೀರು ತುಂಬಿಸುವ ಕಾಮಗಾರಿ. | 57.65 | 41.62 |
| | | ಗ್ರೋಮಾ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ | Augmentation ಚನ್ನರಾಯಪಟ್ಟಣ ತಾಲ್ಲೂಕಿನ ಆನೆಕೆರೆ-ಶಂಭುದೇವರ ಕೆರೆಗೆ ನೀರು ತುಂಬಿಸುವ ಕಾಮಗಾರಿ | 26.00 | 4.38 |
| | | ಮೆ॥ ಶ್ರೀ ಶ್ರೀನಿವಾಸ ಕನ್‌ಸ್ಟ್ರಕ್ಷನ್ಸ್ ಇಂಡಿಯಾ ಪ್ರೈ.ಲಿ. ಬಳ್ಳಾರಿ | 19) ಚನ್ನರಾಯಪಟ್ಟಣ ತಾಲ್ಲೂಕಿನ ಬಾಗೂರು ಹೋಬಳಿಯ 19 ಕೆರೆಗಳಿಗೆ ನೀರು ತುಂಬಿಸುವ ಕಾಮಗಾರಿ. | 32.00 | 9.37 |

| ಕ್ರ ಸಂ | ವಿಭಾಗದ ಹೆಸರು | ಗುತ್ತಿಗೆದಾರರ ಹೆಸರು | ಪ್ರಮುಖ ಕಾಮಗಾರಿಯ ಹೆಸರು | ಕಾಮಗಾರಿಯ ಗುತ್ತಿಗೆ ಮೊತ್ತ | ಜುಲೈ 2019ರಿಂದ ಫೆಬ್ರವರಿ 2021ರವರೆಗೆ ಪಾವತಿಸಿರುವ ಬಿಲ್ಲಿನ ಮೊತ್ತ |
|---|---|---|---|---|---|
| | | ಎಂ.ವೈ. ಕಟ್ಟೀಮನಿ | 20) ಹೇಮಾವತಿ ಎಡದಂಡೆ ನಾಲೆಯ ಸರಪಳಿ 0.00 ಕಿ.ಮೀ ನಿಂದ 71.62 ಕಿ.ಮೀವರೆಗೆ ಮತ್ತು ಬಿ.ಎನ್.ಟಿ. ಅಪ್ರೋಚ್ ನಾಲೆ 0.00 ಕಿ.ಮೀ ಇಂದ 5.57 ಕಿ.ಮೀವರೆಗೆ ಆಧುನೀಕರಣ ಕಾಮಗಾರಿ. | 762.42 | 0.00 |
| | | ಎಂ.ವೈ. ಕಟ್ಟೀಮನಿ | 21) ಹೇಮಾವತಿ ಎಡದಂಡೆ 72.00 ಕಿ.ಮೀ. ನಿಂದ 212 ಕಿ.ಮೀವರೆಗೆ ನಾಲಾ ಆಧುನೀಕರಣ ಕಾಮಗಾರಿ. | 865.27 | 315.56 |
| 6 | ನಂ.3 ಹೇಮಾವತಿ ಎಡದಂಡೆ ನಾಲಾ ವಿಭಾಗ, ಕೃಷ್ಣರಾಜಪೇಟೆ | ವೈ. ಚಿಚ್ಚೇಶ್ವರರಾವ್ (ಶ್ರೀ ಶ್ರೀನಿವಾಸ್ ಕನ್‌ಸ್ಟ್ರಕ್ಷನ್ಸ್ ಇಂಡಿಯಾ ಪ್ರೈ.ಲಿ.) | 22) ಹೇಮಾವತಿ ನದಿಯಿಂದ ಗುಡ್ಡೇಹೊಸಹಳ್ಳಿ ಹತ್ತಿರ ನೀರನ್ನು ಎತ್ತಿ ಕೃಷ್ಣರಾಜಪೇಟೆ ಮತ್ತು ನಾಗಮಂಗಲ ತಾಲ್ಲೂಕಿನ ಕೆರೆಗಳಿಗೆ ನೀರು ತುಂಬಿಸುವ ಯೋಜನೆ. | 207.36 | 10.41 |
| | | | ಒಟ್ಟು :- | **4301.88** | **930.20** |

- ಜುಲೈ 2019 ರಿಂದ ಫೆಬ್ರವರಿ 2021ರ ಅಂತ್ಯದವರೆಗೆ ಬಿಡುಗಡೆಯಾಗಿರುವ ರೂ.**1538.40/-** ಕೋಟಿಗಳ ಪೈಕಿ ರೂ.**930.20/-** ಕೋಟಿಗಳನ್ನು ರೂ.5.00 ಕೋಟಿಗಳಿಗೂ ಮೇಲ್ಪಟ್ಟ ಪ್ರಮುಖ ಕಾಮಗಾರಿಗಳಿಗೆ ಪಾವತಿ ಮಾಡಲಾಗಿರುತ್ತದೆ.
- ಉಳಿಕೆ ರೂ.**608.20/-** ಕೋಟಿಗಳನ್ನು ಎಸ್.ಸಿ.ಪಿ, ಟಿ.ಎಸ್.ಪಿ, ಹಾಗೂ ಇತರೆ ಮೂಲಭೂತ ಸೌಕರ್ಯ ಕಲ್ಪಿಸುವ ಕಾಮಗಾರಿಗಳು ಮತ್ತು ನಿರ್ವಹಣೆ ಕಾಮಗಾರಿಗಳಿಗಾಗಿ ಪಾವತಿ ಮಾಡಲಾಗಿದೆ.

** ** **

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1334
2. ಪ್ರಶ್ನೆ ಮಂಡಿಸಿರುವವರು : ಶ್ರೀ ಶ್ರೀನಿವಾಸ. ಎಂ
3. ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಯವರು
4. ಉತ್ತರಿಸ ಬೇಕಾದ ದಿನಾಂಕ : 09/03/2021

| ಪ್ರ ಸಂ | ಪ್ರಶ್ನೆ | ಉತ್ತರ |
|---|---|---|
| 01 | ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ಧನಸಹಾಯ ಕೋರಿ ಬರುವ ಅರ್ಜಿಗಳ ವಿಲೇವಾರಿ ತೀವ್ರ ವಿಳಂಬಗತಿಯಲ್ಲಿ ಸಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ? ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ಯಾವ ಯಾವ ಕಾಯಿಲೆಗಳ ಚಿಕಿತ್ಸೆ ಪಡೆದ ರೋಗಿಗಳಿಗೆ ಧನ ಸಹಾಯ ನೀಡಲಾಗುತ್ತಿದೆ ? ಇದರ ಮಾನದಂಡಗಳೇನು ? ಆದೇಶ ಪ್ರತಿ ಒದಗಿಸುವುದು | ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ಸಲ್ಲಿಕೆಯಾಗುತ್ತಿರುವ ಅರ್ಜಿಗಳ ವಿಲೇವಾರಿಯಲ್ಲಿ ಯಾವುದೇ ವಿಳಂಬವಾಗುತ್ತಿರುವುದಿಲ್ಲ. ಪರಿಹಾರ ಮಂಜೂರು ಮಾಡಲು ನಿಗಧಿಪಡಿಸಿರುವ ಅವಶ್ಯ ದಾಖಲೆಗಳನ್ನು ಸಲ್ಲಿಸಿದಲ್ಲಿ ಅರ್ಜಿದಾರರ ಖಾತೆಗೆ ನೇರವಾಗಿ ಡಿ.ಬಿ.ಟಿ ಯೋಜನೆಯ ಮೂಲಕ ಪರಿಹಾರದ ಮೊತ್ತವನ್ನು ಯಾವುದೇ ಕಾಲ ವಿಳಂಬವಿಲ್ಲದೆ ಬಿಡುಗಡೆ ಮಾಡಲಾಗುತ್ತಿದೆ.<br><br>ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ಕಿಡ್ನಿ, ಕ್ಯಾನ್ಸರ್, ಹೃದಯ, ಮೆದುಳು, ಯಕೃತ್ ಸಂಬಂಧಿತ ಮಾರಣಾಂತಿಕ ಕಾಯಿಲೆಗಳು ಮತ್ತು ಗಂಭೀರ ಕಾಯಿಲೆಗಳಿಗೆ ಒಳ ರೋಗಿಯಾಗಿ ಚಿಕಿತ್ಸೆ ಪಡೆದಿರುವಂತಹ ಪ್ರಕರಣಗಳಿಗೆ ಧನ ಸಹಾಯ ನೀಡಲಾಗುತ್ತಿದೆ. ಮುಖ್ಯಮಂತ್ರಿಗಳ ಪರಿಹಾರ ನಿಧಿ ಮುಖ್ಯಮಂತ್ರಿಗಳ ವಿವೇಚನೆಗೆ ಒಳಪಟ್ಟ ನಿಧಿಯಾಗಿದ್ದು, ಅವರ ತೀರ್ಮಾನವೇ ಅಂತಿಮ ವಾಗಿರುತ್ತದೆ. ಆದೇಶದ ಪ್ರತಿಯನ್ನು ಮಾಹಿತಿಗಾಗಿ ಒದಗಿಸಲಾಗಿದೆ. |
| 02 | ಕಳೆದ ಮೂರು ವರ್ಷಗಳಿಂದ ಈ ಸಾಲಿನವರೆಗೆ ಶಾಸಕರ ಶಿಫಾರಸ್ಸಿನ ಮೇರೆಗೆ ಮಂಡ್ಯ ವಿಧಾನ ಸಭಾ ಕ್ಷೇತ್ರದಿಂದ ಬಂದಿರುವ ಅರ್ಜಿಗಳ ಸಂಖ್ಯೆ ಎಷ್ಟು ? ಎಷ್ಟು ಪ್ರಕರಣಗಳಿಗೆ ಧನಸಹಾಯ ನೀಡಲಾಗಿರುತ್ತದೆಯೇ ? (ವಿವರ ಒದಗಿಸುವುದು) | ದಿನಾಂಕ :25/05/2018 ರಿಂದ ದಿನಾಂಕ :03/03/2021ರ ವರೆಗೂ ಮಂಡ್ಯ ವಿಧಾನ ಸಭಾ ಕ್ಷೇತ್ರದ ಶಾಸಕರ ಶಿಫಾರಸ್ಸಿನ ಮೇರೆಗೆ ಒಟ್ಟು 63 ಅರ್ಜಿಗಳು ಸ್ವೀಕೃತವಾಗಿರುತ್ತದೆ. ಈ ಪೈಕಿ 48 ಪ್ರಕರಣಗಳಿಗೆ ಪರಿಹಾರ ಒದಗಿಸಲಾಗಿದೆ. |
| 03 | ಚಿಕಿತ್ಸೆ ಫಲಕಾರಿಯಾಗದೇ ಮರಣ ಹೊಂದಿರುವಂತಹ ಪ್ರಕರಣಗಳಿಗೆ ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ಸಿಗುತ್ತಿರುವ ಸವಲತ್ತುಗಳೇನು ? ಈ ವರೆವಿಗೂ ಇಂತಹ ಪ್ರಕರಣಗಳು ಎಷ್ಟು ಬಾಕಿ ಉಳಿದಿವೆ ? (ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು) | ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ಕಡು ಬಡಜನರ ವೈದ್ಯಕೀಯ ಚಿಕಿತ್ಸೆಗಾಗಿ ನೆರವು ನೀಡಲು ಮಾತ್ರ ಅನುವು ಮಾಡಿಕೊಡಲಾಗಿದ್ದು, ರೋಗಿಯು ಮೃತಪಟ್ಟ ನಂತರ ಅವರ ವಾರಸುದಾರರು ಸಲ್ಲಿಸುವ ಅರ್ಜಿಗಳನ್ನು ಸ್ವೀಕರಿಸಲು ನಿರ್ಬಂಧವಿರುತ್ತದೆ. ವೈದ್ಯಕೀಯ ಚಿಕಿತ್ಸೆಗಾಗಿ ಪರಿಹಾರ ಕೋರಿ ಅರ್ಜಿ ಸಲ್ಲಿಸಿದ ನಂತರ ಅರ್ಜಿದಾರರು ಚಿಕಿತ್ಸೆ ಫಲಕಾರಿಯಾಗದೇ ಮೃತಪಟ್ಟಲ್ಲಿ ವೈದ್ಯಕೀಯ ವೆಚ್ಚದ ಬಿಲ್ಲುಗಳನ್ನು ಮತ್ತು ಮೃತರ ವಾರಸುದಾರರ ಕುರಿತು ಸೂಕ್ತ ದಾಖಲೆಗಳನ್ನು ಪಡೆದು ಮಂಜೂರುಗೊಂಡಿರುವ ಮೊತ್ತವನ್ನು ಅವರ ಕಾನೂನು ಬದ್ಧ ವಾರಸುದಾರರಿಗೆ ನೀಡಲು ಅವಕಾಶವಿರುತ್ತದೆ. |

ಸಿಎಂ/43/ಸಿಎಂಆರ್‌ಎಫ್/ಜಿಇಎನ್/2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

ಡಾ॥ ಎಸ್. ಸೆಲ್ವಕುಮಾರ್, ಭಾ.ಆ.ಸೇ.,
ಮುಖ್ಯ ಮಂತ್ರಿಯವರ ಕಾರ್ಯದರ್ಶಿ
**Dr. S. SELVAKUMAR, I.A.S.,**
Secretary to Chief Minister



ಮುಖ್ಯ ಮಂತ್ರಿಯವರ ಸಚಿವಾಲಯ
ವಿಧಾನ ಸೌಧ, ಬೆಂಗಳೂರು – ೫೬೦ ೦೦೧
Chief Minister's Secretariat
Vidhana Soudha
Bengaluru - 560 001
Ph. No. : 080-22251476
22033372
Fax No.: 22353126

ಸಿಎಂ/132/ಸಿಎಂಆರ್‌ಎಫ್/ಜಿಇಎನ್/2019 ದಿನಾಂಕ: 06/11/2019

**ಅಧಿಕೃತ ಜ್ಞಾಪನ**

ವಿಷಯ:- ಮಾನ್ಯ ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ಬಡ ರೋಗಿಗಳ ವೈದ್ಯಕೀಯ ಚಿಕಿತ್ಸೆಗಾಗಿ ಪರಿಹಾರ ವಿತರಿಸಲು ನಿರ್ವಹಿಸಬೇಕಾಗಿರುವ ದಾಖಲೆಗಳು ಮತ್ತು ನಿಯಮಗಳ ಕುರಿತು.

ಉಲ್ಲೇಖ:-
1) ಮುಖ್ಯಮಂತ್ರಿಗಳ ಪರಿಹಾರ ನಿಧಿಯ ಸರ್ಕಾರಿ ಆದೇಶ ಸಂಖ್ಯೆ: ಎಫ್.ಡಿ. 103 ಬಿಎಂಎಸ್ 58 ದಿನಾಂಕ: 03/12/1958
2) ಮುಖ್ಯಮಂತ್ರಿಗಳ ಪರಿಹಾರ ನಿಧಿಯ ಸರ್ಕಾರಿ ಆದೇಶ ಸಂಖ್ಯೆ: ಎಫ್.ಡಿ. 35 ಬಿಎಂಎಸ್ 78 ದಿನಾಂಕ: 12/09/1978
3) ಕಛೇರಿ ಜ್ಞಾಪನ ಸಂಖ್ಯೆ: ಸಿಎಂ/2137/ಸಿಎಂಆರ್‌ಎಫ್/2010 ದಿನಾಂಕ: 30/11/2010 ಮತ್ತು ದಿನಾಂಕ: 06/03/2010
4) ಕಡತ ಸಂಖ್ಯೆ: ಸಿಎಂ/132/ಸಿಎಂಆರ್‌ಎಫ್/ಜಿಇಎನ್/2014 ದಿನಾಂಕ: 01/01/2015ರ ಆದೇಶ
5) ಕಛೇರಿ ಜ್ಞಾಪನ ಸಂಖ್ಯೆ: ಸಿಎಂ/ಸಿಎಂಆರ್‌ಎಫ್/ಸಿಜಿಆರ್/2016-17 ದಿನಾಂಕ: 01/10/2016
6) ಅಧಿಕೃತ ಜ್ಞಾಪನ ಸಂಖ್ಯೆ: ಸಿಎಂ/55/ಸಿಎಂಆರ್‌ಎಫ್/ಜಿಇಎನ್/2017 ದಿನಾಂಕ: 23/06/2017
7) ಮುಖ್ಯಮಂತ್ರಿಗಳ ಪರಿಹಾರ ನಿಧಿಯ ಸರ್ಕಾರಿ ಆದೇಶ ಸಂಖ್ಯೆ: ಆಇ 01 ಬಿಎಂಎಸ್ 2017 ದಿನಾಂಕ: 31/10/2019
8) ಪರಿಷ್ಕೃತ ಜ್ಞಾಪನ ಸಂಖ್ಯೆ:ಸಿಎಂ/92/ಸಿಎಂಆರ್‌ಎಫ್/ಜಿಇಎನ್/2018 ದಿನಾಂಕ: 20/06/2018
9) ಸುತ್ತೋಲೆ ಸಂಖ್ಯೆ: ಸಿಎಂ/69/ಸಿಎಂಆರ್‌ಎಫ್/ಜಿಇಎನ್/2019 ದಿನಾಂಕ: 12/06/2019
10) ಅಧಿಕೃತ ಜ್ಞಾಪನ ಸಂಖ್ಯೆ:ಸಿಎಂ/105/ಸಿಎಂಆರ್‌ಎಫ್/ಜಿಇಎನ್/2019 ದಿನಾಂಕ: 16/09/2019
11) ಕಡತ ಸಂಖ್ಯೆ: ಸಿಎಂ/105/ಸಿಎಂಆರ್‌ಎಫ್/ಜಿಇಎನ್/2019 ರ ಟಿಪ್ಪಣಿ ಪುಟದ ಕಂಡಿಕೆ 46 ದಿನಾಂಕ: 04/11/2019ರ ಆದೇಶ

*******

ಮಾನ್ಯ ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ವೈದ್ಯಕೀಯ ಚಿಕಿತ್ಸಾ ವೆಚ್ಚಕ್ಕಾಗಿ ಪರಿಹಾರ ಕೋರಿ ಸಲ್ಲಿಕೆಯಾಗುವ ಅರ್ಜಿಗಳೊಂದಿಗೆ ಸಲ್ಲಿಕೆಯಾಗುತ್ತಿದ್ದ ಚಿಕಿತ್ಸಾ ವೆಚ್ಚದ ಅಂತಿಮ ಮೂಲ ಬಿಲ್ಲುಗಳನ್ನು ಮತ್ತು ಬಿಡುಗಡೆ ಸಾರಾಂಶ ಪತ್ರವನ್ನು ಸ್ಕ್ಯಾನ್ ಮಾಡಿ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟಿಗೆ ಈ-ಮೇಲ್ ಮೂಲಕ ಸಲ್ಲಿಸಿ, ಆಯುಷ್ಮಾನ್ ಭಾರತ್ /ಆರೋಗ್ಯ ಕರ್ನಾಟಕ ಯೋಜನೆಯ ಸೌಲಭ್ಯದಂತೆ ಟ್ರಸ್ಟಿನ ವೈದ್ಯಾಧಿಕಾರಿಗಳು ಸದರಿ ದಾಖಲೆಗಳನ್ನು ಪರಿಶೀಲಿಸಿ, ಅರ್ಜಿದಾರರು ಪಡೆದಿರುವ ಚಿಕಿತ್ಸಾ ಕ್ರಮಕ್ಕೆ ಸರ್ಕಾರ ನಿಗದಿ ಪಡಿಸಿರುವ ದರಗಳನ್ವಯ ಸ್ಕ್ರೂಟಿನಿ ಮಾಡಿ, ನಿಖರ ವೈದ್ಯಕೀಯ ವೆಚ್ಚದ ಕುರಿತು ವರದಿ ಸಲ್ಲಿಸಿದನಂತರ, ವರದಿಯಲ್ಲಿ ಶಿಫಾರಸ್ಸುಗೊಂಡಿರುವ ಮೊತ್ತದ ಆಧಾರದ ಮೇಲೆ ಕಡತವನ್ನು ಸಿದ್ದಪಡಿಸಿ, ಪಟ್ಟಿಯಲ್ಲಿ ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಪಡೆದು ನಂತರ ಧನಾದೇಶಗಳ ಮೂಲಕ ಪರಿಹಾರದ ಮೊತ್ತವನ್ನು ಫಲಾನುಭವಿಗೆ ವಿತರಿಸಲು ಉಲ್ಲೇಖ ಸಂಖ್ಯೆ 10ರ ಅಧಿಕೃತ ಜ್ಞಾಪನದಂತೆ ಕ್ರಮ ವಹಿಸಲಾಗುತ್ತಿತ್ತು.

ಪ್ರಸ್ತುತ ಮಾನ್ಯ ಮುಖ್ಯಮಂತ್ರಿಗಳು ಉಲ್ಲೇಖ 11 ರಲ್ಲಿ ಆದೇಶಿಸಿರುವಂತೆ ಉಲ್ಲೇಖ 10ರ ಆದೇಶ ಹಾಗೂ ಪಾಲನೆ ಕ್ರಮವನ್ನು ಹಿಂಪಡೆದು ಈ ಮೊದಲು ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ಅರ್ಜಿಗಳ ವಿಲೇವಾರಿ ಮಾಡಲು ಅನುಸರಿಸಲಾಗುತ್ತಿದ್ದ ಕ್ರಮವನ್ನೆ ಮುಂದುವರೆಸಲು ಆದೇಶಿಸಿರುವುದರಿಂದ ಈ ಕೆಳಕಂಡಂತೆ ಅರ್ಜಿಗಳನ್ನು ವಿಲೇವಾರಿ ಮಾಡಲು ಮತ್ತು ನಿಬಂಧನೆಗಳನ್ನು ಅನುಸರಿಸಲು ಈ ಅಧಿಕೃತ ಜ್ಞಾಪನದ ಮೂಲಕ ಸೂಚಿಸಲಾಗಿದೆ.



>>>>2

ಅನುಸರಿಸಬೇಕಾದ ಕ್ರಮಗಳು ಮತ್ತು ನಿಬಂಧನೆಗಳು:-

1) ವೈದ್ಯಕೀಯ ಚಿಕಿತ್ಸಾವೆಚ್ಚಕ್ಕಾಗಿ ಪರಿಹಾರ ಕೋರಿ ಸಲ್ಲಿಸಲಾಗುವ ಅರ್ಜಿಯೊಂದಿಗೆ ಕಡ್ಡಾಯವಾಗಿ ಬಿ.ಪಿ.ಎಲ್ ಪಡಿತರ ಚೀಟಿಯನ್ನು ಪಡೆಯುವುದು.

2) ವಿಳಾಸ ದೃಢೀಕರಣಕ್ಕಾಗಿ ಮತ್ತು ಬ್ಯಾಂಕ್ ಖಾತೆಯ ಮಾಹಿತಿಗಾಗಿ ಆಧಾರ್ ಗುರುತಿನ ಚೀಟಿ / ಚುನಾವಣಾ ಗುರುತಿನ ಚೀಟಿ ಹಾಗೂ ಬ್ಯಾಂಕ್ ಪಾಸ್ ಪುಸ್ತಕದ ವಿವರವುಳ್ಳ ಪುಟದ ಪ್ರತಿಗಳನ್ನು ಪಡೆಯುವುದು.

3) ವೈದ್ಯಕೀಯ ಚಿಕಿತ್ಸೆ ಪಡೆದು ಪರಿಹಾರ ಕೋರಿ ಸಲ್ಲಿಸಲಾಗುವ ಅರ್ಜಿಯೊಂದಿಗೆ ಆಸ್ಪತ್ರೆಯ ಚಿಕಿತ್ಸಾ ವೆಚ್ಚದ ಅಂತಿಮ ಮೂಲ ಬಿಲ್ಲುಗಳನ್ನು ಮತ್ತು ಬಿಡುಗಡೆ ಸಾರಾಂಶ ಪತ್ರದ ಪ್ರತಿಯನ್ನು ಪಡೆಯುವುದು. ಅನಧಿಕೃತ ಔಷಧಾಲಯಗಳ ಬಿಲ್ಲುಗಳನ್ನು ಪರಿಗಣಿಸಬಾರದು. (ಬಿಲ್ಲುಗಳು ಮುದ್ರಿತ ದಿನಾಂಕದಿಂದ ಒಂದು ವರ್ಷದೊಳಗಿರಬೇಕು)

4) ವೈದ್ಯಕೀಯ ಚಿಕಿತ್ಸೆ ಪಡೆಯಬೇಕಾಗಿರುವ ಅರ್ಜಿದಾರರು ಸಲ್ಲಿಸುವ ಅರ್ಜಿಯೊಂದಿಗೆ ಆಸ್ಪತ್ರೆಯ ಚಿಕಿತ್ಸಾ ವೆಚ್ಚದ ಮೂಲ ಅಂದಾಜು ಪಟ್ಟಿಯನ್ನು ಪಡೆಯುವುದು. (ಚಿಕಿತ್ಸಾ ವೆಚ್ಚದ ಅಂದಾಜು ಪಟ್ಟಿ ಮುದ್ರಿತ ದಿನಾಂಕದಿಂದ ಒಂದು ತಿಂಗಳೊಳಗೆ ಇರಬೇಕು)

5) ಮಾನ್ಯ ಮುಖ್ಯಮಂತ್ರಿಗಳು ಮಂಜೂರು ಮಾಡಿರುವ ಮೊತ್ತ ಅಥವಾ ಒಟ್ಟು ಮೂಲ ಬಿಲ್ಲುಗಳ / ಚಿಕಿತ್ಸಾ ವೆಚ್ಚದ ಅಂದಾಜು ಪಟ್ಟಿಯ ಶೇ 50ರಷ್ಟು, ಇವೆರಡರಲ್ಲಿ ಯಾವುದು ಕಡಿಮೆಯೋ ಅ ಮೊತ್ತವನ್ನು ರೂ.2.00ಲಕ್ಷಗಳಿಗೆ ಸೀಮಿತಗೊಳಿಸಿ ಪರಿಹಾರ ಬಿಡುಗಡೆ ಮಾಡಲು ಪರಿಗಣಿಸುವುದು. ರೂ.2.00ಲಕ್ಷಕ್ಕೂ ಮೇಲ್ಪಟ್ಟ ಮೊತ್ತವನ್ನು ಬಿಡುಗಡೆ ಮಾಡಲು ಮಾನ್ಯ ಮುಖ್ಯಮಂತ್ರಿಗಳು ವಿಶೇಷ ಪ್ರಕರಣವೆಂದು ಆದೇಶಿಸಿದಲ್ಲಿ ಪ್ರತ್ಯೇಕವಾಗಿ ಕಡತ ಮಂಡಿಸಿ ಮಾನ್ಯ ಮುಖ್ಯಮಂತ್ರಿಗಳಿಂದ ಅನುಮೋದನೆ ಪಡೆಯುವುದು.

6) ಯಾವುದೇ ಸರ್ಕಾರದ ಆರೋಗ್ಯ ಯೋಜನೆಗಳ ಸೌಲಭ್ಯವನ್ನು ಪಡೆದಿದ್ದಲ್ಲಿ ಅಥವಾ ಖಾಸಗಿ ವಿಮಾ ಕಂಪನಿಗಳಿಂದ ಸೌಲಭ್ಯ ಪಡೆದಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಬಾರದು.

7) ಚಿಕಿತ್ಸಾ ವೆಚ್ಚದ ಅಂದಾಜು ಪಟ್ಟಿ ಸಲ್ಲಿಕೆಯಾದಂತಹ ಪ್ರಕರಣಗಳಿಗೆ ಮಂಜೂರುಗೊಂಡ ಮೊತ್ತಕ್ಕೆ ಆಸ್ಪತ್ರೆಯ ಹೆಸರಿಗೆ ಭರವಸೆ ಪತ್ರವನ್ನು ವಿತರಿಸುವುದು. ಆಸ್ಪತ್ರೆಯಿಂದ ಮೂಲ ಅಂತಿಮ ಬಿಲ್ಲುಗಳು, ಬಿಡುಗಡೆ ಸಾರಾಂಶ ಪತ್ರದ ಪ್ರತಿ, ಮತ್ತು ಬೇಬಾಕಿ ಪತ್ರ ಸಲ್ಲಿಕೆಯಾದನಂತರ ಆಸ್ಪತ್ರೆ / ಫಲಾನುಭವಿಯ ಹೆಸರಿಗೆ ಪರಿಹಾರದ ಮೊತ್ತವನ್ನು ಬಿಡುಗಡೆ ಮಾಡುವುದು. ಆಸ್ಪತ್ರೆಯ ಬಿಲ್ಲಿನ ಮೊತ್ತದಲ್ಲಿ ರಿಯಾಯಿತಿ, ದಾನಿಗಳ ನೆರವು, ಇತರೇ ಸಹಾಯ ಎಂದು ನಮೂದಿಸಲಾಗುವ ಮೊತ್ತವನ್ನು ಒಟ್ಟು ಬಿಲ್ಲುಗಳ ಮೊತ್ತದಲ್ಲಿ ಕಡಿತಗೊಳಿಸಿ ಉಳಿದ ಮೊತ್ತವನ್ನು ಪರಿಗಣಿಸುವುದು ಹಾಗೂ ಅಂದಾಜು ಪಟ್ಟಿಯಲ್ಲಿ ನಮೂದಿಸಿರುವಂತಹ ಮೊತ್ತಕ್ಕಿಂತ ಕಡಿಮೆ ಬಿಲ್ಲುಗಳು ಸಲ್ಲಿಕೆಯಾದಲ್ಲಿ ಅನುಪಾತದಂತೆ ಲೆಕ್ಕ ಮಾಡಿ ಪರಿಹಾರ ಬಿಡುಗಡೆ ಮಾಡುವುದು.

8) ಅರ್ಜಿಗಳನ್ನು ಶಾಖೆಯಲ್ಲಿ ಸ್ವೀಕರಿಸಿದನಂತರ ಸ್ಕ್ರೂಟನಿ ಮಾಡಿ, ಬಿಲ್ಲುಗಳ / ಅಂದಾಜು ಚಿಕಿತ್ಸಾ ವೆಚ್ಚದ ಮೊತ್ತದಂತೆ ನಿಯಮಾನುಸಾರ ವಿವರ ನೊಂದಣಿ ಮಾಡಿ ಜಂಟಿ ಕಾರ್ಯದರ್ಶಿಗಳಿಂದ ಕಡತ ಅನುಮೋದನೆ ಪಡೆದು ನಂತರ ಪಟ್ಟಿಯನ್ನು ಸಿದ್ದಪಡಿಸಿ ಮುಖ್ಯಮಂತ್ರಿಯವರ ಕಾರ್ಯದರ್ಶಿಗಳ ಮೂಲಕ ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಪಡೆದು ಪರಿಹಾರವನ್ನು ಧನಾದೇಶಗಳ ಮೂಲಕ ಬಿಡುಗಡೆ ಮಾಡುವುದು. ನಿಗಧಿತ ದಾಖಲೆಗಳನ್ನು ಅರ್ಜಿಯೊಂದಿಗೆ ಲಗತ್ತಿಸದೆ ಇದ್ದ ಪಕ್ಷದಲ್ಲಿ ಅಂತಹ ಅರ್ಜಿಗಳನ್ನು ಸ್ವೀಕರಿಸಬಾರದು.

9) ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ವೈದ್ಯಕೀಯ ವೆಚ್ಚಕ್ಕೆ ಪರಿಹಾರ ಬಿಡುಗಡೆ ಮಾಡಲು ಆದೇಶವಾಗಿರುವ ಹಿನ್ನಲೆಯಲ್ಲಿ ಚಿಕಿತ್ಸೆ ಪಡೆದಿರುವ ವ್ಯಕ್ತಿಯು ಮೃತಪಟ್ಟ ನಂತರ ಪರಿಹಾರ ಕೋರಿ ಸಲ್ಲಿಕೆಯಾಗುವ ಅರ್ಜಿಗಳನ್ನು ಪರಿಗಣಿಸಬಾರದು.

10) ಮೆಡಿಕೋ ಲಿಗಲ್ ಕೇಸ್ (ಎಂ.ಎಲ್.ಸಿ), ಪ್ರಕರಣಗಳಿಗೆ ಸಂಬಂಧಿಸಿದ ಅರ್ಜಿಗಳನ್ನು ಮಾನ್ಯ ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ಪರಿಹಾರ ಬಿಡುಗಡೆ ಮಾಡಲು ಪರಿಗಣಿಸಬಾರುದು.

11) ಮಾನ್ಯ ಮುಖ್ಯಮಂತ್ರಿಗಳು ನೀಡುವ ಆಶ್ವಾಸನೆಗಳಂತೆ ಸದರಿ ಪ್ರಕರಣಗಳಿಗೆ ಸಂಬಂಧಿಸಿದ ದಾಖಲೆಗಳನ್ನು ಆಯಾ ಜಿಲ್ಲಾಧಿಕಾರಿಗಳಿಂದ ವರದಿಯ ಮೂಲಕ ಪಡೆದು ಕಡತದಲ್ಲಿ ಮಂಡಿಸಿ ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಪಡೆದು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಧನಾದೇಶದ ಮೂಲಕ ಪರಿಹಾರ ಬಿಡುಗಡೆ ಮಾಡುವುದು.



>>>>3

ಸಿಎಂ/132/ಸಿಎಂಆರ್‌ಎಫ್/ಜಿಇಎನ್/2019 ದಿನಾಂಕ: 06/11/2019

ಆರ್ಥಿಕ ಸಹಾಯ ಕೋರಿ ಸಲ್ಲಿಕೆಯಾಗುವ ಅರ್ಜಿಗಳಿಗೆ ಸಂಬಂಧಿಸಿದಂತೆ ಅರ್ಜಿದಾರರ ಆರ್ಥಿಕ ಸ್ಥಿತಿ ಮತ್ತು ಪ್ರಕರಣದ ಕುರಿತು ಸಂಪೂರ್ಣ ಮಾಹಿತಿಯನ್ನು ಜಿಲ್ಲಾಧಿಕಾರಿಗಳ ವರದಿಯ ಮೂಲಕ ಪಡೆದು ಕಡತದಲ್ಲಿ ಮಂಡಿಸಿ ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಪಡೆದು ನಂತರ ಕ್ರಮ ವಹಿಸುವುದು. ತುರ್ತು ಪ್ರಕರಣಗಳಲ್ಲಿ ಮಾನ್ಯ ಮುಖ್ಯಮಂತ್ರಿಗಳು ಮೌಖಿಕವಾಗಿ ಆದೇಶಿಸುವಂತಹ ವಿಶೇಷ ಪ್ರಕರಣಗಳಿಗೆ ಪರಿಹಾರ ಬಿಡುಗಡೆ ಮಾಡಿ ಘಟನೋತ್ತರ ಆದೇಶ / ಮಂಜೂರಾತಿಯನ್ನು ಕಡತದಲ್ಲಿ ಪಡೆಯುವುದು.

12) ಕೆರೆ, ಬಾವಿ, ನದಿ, ಹಳ್ಳ, ಸಮುದ್ರಗಳಲ್ಲಿ ಆಕಸ್ಮಿಕವಾಗಿ ಬಿದ್ದು ಮೃತಪಡುವ ವ್ಯಕ್ತಿಗಳ ಕುಟುಂಬಗಳಿಗೆ, ಜಾನುವಾರುಗಳು ಮೃತ ಪಟ್ಟಿರುವ, ಆಸ್ತಿ-ಬೆಳೆ ನಷ್ಟವಾಗಿರುವಂತಹ ಪ್ರಕರಣಗಳಿಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಗಳ ಹಂತದಲ್ಲಿಯೇ ಪ್ರಕರಣವನ್ನು ಇತ್ಯರ್ಥ ಪಡಿಸಿಕೊಳ್ಳುವುದು. ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ಪರಿಹಾರ ಬಿಡುಗಡೆ ಮಾಡಲು ಅವಕಾಶವಿರುವುದಿಲ್ಲ. ಉಲ್ಲೇಖ (9)ರ ಸುತ್ತೋಲೆಯಂತೆ ಕ್ರಮ ವಹಿಸುವುದು. ಸದರಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಮಾನ್ಯ ಮುಖ್ಯಮಂತ್ರಿಗಳ ತೀರ್ಮಾನ ಮತ್ತು ಆದೇಶವೇ ಅಂತಿಮವಾಗಿರುತ್ತದೆ.

ಮುಖ್ಯ ಮಂತ್ರಿಗಳ ಪರಿಹಾರ ನಿಧಿ ಮಾನ್ಯ ಮುಖ್ಯಮಂತ್ರಿಗಳ ವಿವೇಚನೆಗೆ ಒಳಪಟ್ಟ ನಿಧಿಯಾಗಿದ್ದು, ಈ ನಿಧಿಯಿಂದ ಪರಿಹಾರದ ಮೊತ್ತವನ್ನು ಚಿಕಿತ್ಸಾ ನಂತರದಲ್ಲಿ / ಚಿಕಿತ್ಸಾ ಪೂರ್ವದಲ್ಲಿ ಅಥವಾ ಮತ್ಯಾವುದೇ ಆರ್ಥಿಕ ಸಹಾಯ ಮಂಜೂರಾತಿ ಪ್ರಕರಣಗಳಲ್ಲಿ ಮಾನ್ಯ ಮುಖ್ಯಮಂತ್ರಿಯವರು ವಿಶೇಷ ಪ್ರಕರಣವೆಂದು ಭಾವಿಸುವ ಅಥವಾ ಯಾವುದೇ ವಿನಾಯಿತಿ ನೀಡಲು ಸೂಚಿಸುವ ಮತ್ತು ಪಟ್ಟಿಯಲ್ಲಿ ಅಥವಾ ವೈಯಕ್ತಿಕ ಕಡತದಲ್ಲಿ ಅನುಮೋದಿಸಿ ಆದೇಶಿಸುವ ಮೊತ್ತವನ್ನು ಬಿಡುಗಡೆ ಮಾಡುವ ಕ್ರಮವನ್ನು ಮೊದಲಿನಿಂದಲೂ ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದು, ಇದೇ ಪದ್ಧತಿಯನ್ನು ಪಾಲಿಸುವುದು.

ಮಾನ್ಯ ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ಸಂಬಂಧಿಸಿದ ಎಲ್ಲಾ ದಾಖಲೆ ಲೆಕ್ಕಪತ್ರಗಳನ್ನು ಲೆಕ್ಕ ಪರಿಶೋಧನೆಗೆ ಒಳಪಡಿಸಬೇಕಾಗಿರುವ ಹಿನ್ನೆಲೆಯಲ್ಲಿ ಈ ಮೇಲ್ಕಂಡ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸುವುದು.

(ಮಾನ್ಯ ಮುಖ್ಯಮಂತ್ರಿಗಳಿಂದ ಅನುಮೋದನೆಗೊಂಡಿದೆ)

(ಡಾ॥ ಎಸ್. ಸೆಲ್ವಕುಮಾರ್)
ಮುಖ್ಯಮಂತ್ರಿಯವರ ಕಾರ್ಯದರ್ಶಿ

ಅಗತ್ಯ ಕ್ರಮಕ್ಕಾಗಿ :-

1) ಮುಖ್ಯಮಂತ್ರಿಯವರ ಜಂಟಿ ಕಾರ್ಯದರ್ಶಿಗಳು, ಪರಿಹಾರ ನಿಧಿ
2) ವಿಶೇಷ ಕರ್ತವ್ಯಾಧಿಕಾರಿಗಳು, ಪರಿಹಾರ ನಿಧಿ
3) ಪರಿಹಾರ ನಿಧಿ ಶಾಖೆಯ ಎಲ್ಲಾ ಅಧಿಕಾರಿ ಸಿಬ್ಬಂಧಿಗಳಿಗೆ

ಮಾಹಿತಿಗಾಗಿ ಪ್ರತಿಯನ್ನು:-

1) ಮಾನ್ಯ ಮುಖ್ಯಮಂತ್ರಿಯವರ ಅಪರ ಮುಖ್ಯ ಕಾರ್ಯದರ್ಶಿಗಳ ಅವಗಾಹನೆಗೆ ಸಲ್ಲಿಸಿದೆ.
2) ಮಾನ್ಯ ಮುಖ್ಯಮಂತ್ರಿಯವರ ಸಲಹೆಗಾರರು, ಇವರ ಅವಗಾಹನೆಗೆ ಸಲ್ಲಿಸಿದೆ.
3) ಮಾನ್ಯ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿಗಳು: 1-2
4) ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದ ಎಲ್ಲಾ ಜಂಟಿ ಕಾರ್ಯದರ್ಶಿಗಳು / ಉಪ ಕಾರ್ಯದರ್ಶಿಗಳು / ವಿಶೇಷ ಕರ್ತವ್ಯಾಧಿಕಾರಿಗಳು / ವಿಶೇಷಾಧಿಕಾರಿಗಳಿಗೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1330

2. ಸದಸ್ಯರ ಹೆಸರು : ಶ್ರೀ ಸಂಜೀವ ಮಠಂದೂರ್ (ಪುತ್ತೂರು)

3. ಉತ್ತರಿಸಬೇಕಾದ ದಿನಾಂಕ : 09.03.2021

4. ಉತ್ತರಿಸುವವರು : ಮುಖ್ಯಮಂತ್ರಿ

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2020–21ನೇ ಆರ್ಥಿಕ ವರ್ಷದಲ್ಲಿ ಪುತ್ತೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬಿದ್ದ ಭಾರಿ ಮಳೆಯಿಂದ ಪ್ರವಾಹ ಹೆಚ್ಚಾಗಿದ್ದು, ಇದರಿಂದ, ಅಪಾರ ಸಾರ್ವಜನಿಕ ಆಸ್ತಿಪಾಸ್ತಿ ಹಾನಿಗೊಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಆದೇಶ ಸಂಖ್ಯೆ: ಕಂಇ 391 ಟಿಎನ್‌ಆರ್ 2020, ದಿನಾಂಕ:10.09.2020 ರಲ್ಲಿ ಪುತ್ತೂರು ತಾಲ್ಲೂಕನ್ನು ಪ್ರವಾಹ ಪೀಡಿತ ತಾಲ್ಲೂಕು ಎಂದು ಘೋಷಿಸಲಾಗಿದೆ. |
| ಆ) | ಈ ಪ್ರವಾಹ ಪೀಡಿತ ಪ್ರದೇಶಗಳ ಕಾಮಗಾರಿಗಳು ಲೆಕ್ಕಶೀರ್ಷಿಕೆ 5051ರಲ್ಲಿ ಅನುಮೋದನೆಗೊಂಡು ಈಗಾಗಲೇ ಟೆಂಡರ್ ಪ್ರಕ್ರಿಯೆ ಮುಕ್ತಾಯಗೊಂಡಿದ್ದು, ಕರಾರು ಒಪ್ಪಂದ ಮಾಡಿಕೊಂಡು ಕಾರ್ಯಾದೇಶ ನೀಡಲು ಆರ್ಥಿಕ ಇಲಾಖೆಯಿಂದ ಪೂರ್ವಾನುಮತಿ ಕೋರಿ ಪ್ರಸ್ತಾವನೆ ಕಳುಹಿಸಿದ್ದರೂ ಇಲ್ಲಿಯವರೆಗೆ ಅನುಮತಿ ನೀಡದಿರಲು ಕಾರಣವೇನು? | ಮೂಲ ಸೌಲಭ್ಯ ಅಭಿವೃದ್ಧಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಿಂದ ಲೆಕ್ಕಶೀರ್ಷಿಕೆ 5051ರಲ್ಲಿ ಪುತ್ತೂರು ವಿಧಾನಸಭಾ ಕ್ಷೇತ್ರದ ಪ್ರವಾಹ ಪೀಡಿತ ಪ್ರದೇಶಗಳ ಕಾಮಗಾರಿಗಳ ಕುರಿತು ಯಾವುದೇ ಟೆಂಡರ್ ಪ್ರಕ್ರಿಯೆ ಕೈಗೊಂಡಿರುವುದಿಲ್ಲ. ಆದ್ದರಿಂದ ಆರ್ಥಿಕ ಇಲಾಖೆಯಲ್ಲಿ ಈ ಬಗ್ಗೆ ಯಾವುದೇ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |

ಸಂಖ್ಯೆ:ಆಇ 85 ವೆಚ್ಚ–7/2021

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1294
ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್
ಉತ್ತರಿಸಬೇಕಾದ ದಿನಾಂಕ : 09.03.2021
ಉತ್ತರಿಸುವ ಸಚಿವರು : ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಳಗಾವಿ ಜಿಲ್ಲೆ, ಬೈಲಹೊಂಗಲ ನಗರವು ಕಂದಾಯ, ಪೊಲೀಸ್ ಹಾಗೂ ವಾಣಿಜ್ಯ ವಿಭಾಗಗಳ ಕೇಂದ್ರ ಸ್ಥಾನವಾಗಿರುವುದು ನಿಜವೇ ; | ಹೌದು. |
| (ಆ) | ಈ ನಗರವು ಹತ್ತಿ, ಸೊಯಾಬಿನ್, ಕಬ್ಬು ಮುಂತಾದ ಬೆಳೆಗಳ ಮಾರುಕಟ್ಟೆಗೆ ಪ್ರಸಿದ್ಧಿಯನ್ನು ಹೊಂದಿದ್ದು, ಸುತ್ತ-ಮುತ್ತಲಿನ ಎಲ್ಲಾ ತಾಲ್ಲೂಕುಗಳ ರೈತರು ಇಲ್ಲಿ ವ್ಯಾಪಾರಕ್ಕಾಗಿ ಮಾರುಕಟ್ಟೆಗೆ ಬರುತ್ತಿರುವುದು ನಿಜವೇ ; | ಹೌದು. |
| (ಇ) | ಸಾರ್ವಜನಿಕರು ಕಂದಾಯ, ಪೊಲೀಸ್ ಹಾಗೂ ವಾಣಿಜ್ಯ ಇಲಾಖೆಗಳ ಕೆಲಸಕ್ಕೆ ಹಾಗೂ ರೈತರು ಕೃಷಿ ಕೆಲಸಗಳಿಗೆ ಹಾಗೂ ವಿದ್ಯಾರ್ಥಿಗಳು ಶಾಲಾ-ಕಾಲೇಜಿಗೆ ಬರುವುದರಿಂದ ಬೈಲಹೊಂಗಲ ನಗರದಲ್ಲಿ ಟ್ರಾಫಿಕ್ ಸಮಸ್ಯೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಬಂದಿದೆ. |
| (ಈ) | ಹಾಗಿದ್ದಲ್ಲಿ, ಬೈಲಹೊಂಗಲ ನಗರದಲ್ಲಿ ಟ್ರಾಫಿಕ್ ಪೊಲೀಸ್ ಠಾಣೆಯನ್ನು ಪ್ರಾರಂಭಿಸಲಾಗುವುದೇ ? | ಪರಿಶೀಲಿಸಲಾಗುವುದು. |

**ಹೆಚ್‌ಡಿ 169 ಎಸ್‌ಎಸ್‌ಟಿ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು,
ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನಾ ಸಚಿವರು

17

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1333 |
| ಸದಸ್ಯರ ಹೆಸರು | : | ಶ್ರೀ ಶ್ರೀನಿವಾಸ್ ಎಂ. (ಮಂಡ್ಯ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯ ತಾಲ್ಲೂಕಿನಲ್ಲಿ ಪ್ರತಿನಿತ್ಯ ನಿರಂತರ ವಿದ್ಯುತ್ ಸರಬರಾಜಿನಲ್ಲಿ ವ್ಯತ್ಯಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ವ್ಯಾಪ್ತಿಯ ಮಂಡ್ಯ ತಾಲ್ಲೂಕಿನ ನಗರ ಪ್ರದೇಶ ಹಾಗೂ ನಿರಂತರ ಜ್ಯೋತಿ ಯೋಜನೆಯು ಅನುಷ್ಠಾನಗೊಂಡಿರುವ ಗ್ರಾಮಗಳಿಗೆ ಪ್ರಸ್ತುತ ಪ್ರತಿದಿನ 22 ರಿಂದ 24 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ಯಾವುದೇ ವ್ಯತ್ಯಯವಾಗಿರುವುದಿಲ್ಲ. |
| ಆ) | ಬಂದಿದ್ದಲ್ಲಿ ಈ ವ್ಯತ್ಯಯದ ಕುರಿತು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | |
| ಇ) | ಮಂಡ್ಯ ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ಕಳೆದ 3 ವರ್ಷಗಳಲ್ಲಿ ಮಂಜೂರಾಗಿರುವ ಸಬ್‌ಸ್ಟೇಷನ್‌ಗಳೆಷ್ಟು; ಇವುಗಳಲ್ಲಿ ಕಾಮಗಾರಿ ಪ್ರಾರಂಭವಾಗಿರುವುದು ಎಷ್ಟು; | ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ವತಿಯಿಂದ ಮಂಡ್ಯ ಜಿಲ್ಲೆಯ ತುಂಬೆಗೆರೆಯಲ್ಲಿ 1*8 ಎಂ.ವಿ.ಎ. ಸಾಮರ್ಥ್ಯದ 66/11 ಕೆ.ವಿ. ವಿದ್ಯುತ್ ಉಪ ಕೇಂದ್ರವನ್ನು ದಿನಾಂಕ 27-02-2019ರಲ್ಲಿ ಚಾಲನೆಗೊಳಿಸಲಾಗಿದೆ.<br><br>ಮಂಡ್ಯ ಜಿಲ್ಲೆಯ ತಂಗಳಗೆರೆ ಸರಹದ್ದಿನಲ್ಲಿ 1*8 ಎಂ.ವಿ.ಎ. ಸಾಮರ್ಥ್ಯದ 66/11 ಕೆ.ವಿ. ವಿದ್ಯುತ್ ಉಪ ಕೇಂದ್ರವನ್ನು ನಿರ್ಮಿಸಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ 83ನೇ ತಾಂತ್ರಿಕ ಸಮನ್ವಯ ಸಮಿತಿ ಸಭೆಯಲ್ಲಿ ಅನುಮೋದನೆಗೊಂಡಿದ್ದು, ಸದರಿ ಉಪಕೇಂದ್ರಕ್ಕೆ ಅವಶ್ಯವಿರುವ ಜಮೀನನ್ನು ಗುರುತಿಸುವ ಕಾರ್ಯವು ಜಾರಿಯಲ್ಲಿರುತ್ತದೆ. ದಿನಾಂಕ:13.01.2021 ರಂದು ಜಿಲ್ಲಾಧಿಕಾರಿ, ಮಂಡ್ಯ ರವರಿಗೆ ಸರ್ಕಾರಿ ಜಾಗವನ್ನು ಗುರುತಿಸಿ, ಹಸ್ತಾಂತರಿಸಲು ಮನವಿ ಸಲ್ಲಿಸಲಾಗಿದೆ. |
| ಈ) | ಮಂಜೂರಾಗಿರುವ ಸಬ್‌ಸ್ಟೇಷನ್‌ಗಳ ಕಾಮಗಾರಿಗಳು ಪ್ರಾರಂಭವಾಗದೇ ವಿಳಂಬಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಬಗ್ಗೆ ಸರ್ಕಾರದ ತೆಗೆದುಕೊಂಡಿರುವ ಕ್ರಮಗಳೇನು? | |

**ಸಂಖ್ಯೆ: ಎನರ್ಜಿ 59 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

10(a)

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1220 |
| ಸದಸ್ಯರ ಹೆಸರು | : | ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್. (ದೇವನಹಳ್ಳಿ) |
| ಉತ್ತರಿಸಬೇಕಾದ ದಿನಾಂಕ | : | 09-03-2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

****

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ದೇವನಹಳ್ಳಿ ವಿಧಾನಸಭಾ ಕ್ಷೇತ್ರದ ದೇವನಹಳ್ಳಿ ಪಟ್ಟಣಕ್ಕೆ ಕಾವೇರಿ ಕುಡಿಯುವ ನೀರನ್ನು ಒದಗಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ 800ಚ.ಕಿ.ಮೀ. ವ್ಯಾಪ್ತಿಯಲ್ಲಿ ಹಳೆಯ ನಗರ – 245 ಚ.ಕಿ.ಮೀ, ಹಿಂದಿನ ನಗರಸಭೆ / ಪುರಸಭೆ – 330ಚ.ಕಿ.ಮೀ ಮತ್ತು 110 ಹಳ್ಳಿಗಳು – 225ಚ.ಕಿ.ಮೀ ಪ್ರದೇಶಗಳ ಪೈಕಿ, ಪ್ರಸ್ತುತ ಬೆಂಗಳೂರು ಜಲಮಂಡಳಿಯು 575ಚ.ಕಿ.ಮೀ ವ್ಯಾಪ್ತಿಯ ಹಳೆಯ ನಗರ ಮತ್ತು ಹಿಂದಿನ 7 ನಗರಸಭೆ / 1 ಪುರಸಭೆಗೆ ಮತ್ತು 110 ಹಳ್ಳಿಗಳ ಪೈಕಿ 41 ಹಳ್ಳಿಗಳಿಗೆ ಕೇವಲ ವಾರಕ್ಕೆ ಎರಡು ಬಾರಿ ಕುಡಿಯುವ ನೀರನ್ನು ಸರಬರಾಜು ಮಾಡಲಾಗುತ್ತಿದ್ದು, ದೇವನಹಳ್ಳಿ ಪಟ್ಟಣವು ಈ ಮೇಲೆ ತಿಳಿಸಿರುವ ವ್ಯಾಪ್ತಿಯ ಹೊರಗಿರುವುದರಿಂದ ಸದರಿ ಪ್ರದೇಶಕ್ಕೆ ನೀರು ಸರಬರಾಜು ಮಾಡಲು ಸಾಧ್ಯವಿರುವುದಿಲ್ಲ. |
| ಆ | ಹಾಗಿದ್ದಲ್ಲಿ, ಈಗಾಗಲೇ ಬೆಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಕಾವೇರಿ ನೀರು ಒದಗಿಸಲಾಗುತ್ತಿದ್ದು ಇಲ್ಲಿಂದ ಬಹಳ ಹತ್ತಿರದಲ್ಲಿರುವ ದೇವನಹಳ್ಳಿ ಪಟ್ಟಣಕ್ಕೆ ಕಾವೇರಿ ನೀರು ಒದಗಿಸಲು ಸರ್ಕಾರ ಕೈಗೊಳ್ಳಲಿರುವ ಕ್ರಮಗಳೇನು; (ಮಾಹಿತಿ ನೀಡುವುದು). | ಬೆಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಕೇಂದ್ರ ಸರ್ಕಾರದ ಅನುಮೋದನೆಯಿಂದ ಪ್ರತ್ಯೇಕ ನೀರಿನ ಕೊಳವೆ ಮಾರ್ಗದಲ್ಲಿ ಕಾವೇರಿ ನೀರನ್ನು ಸರಬರಾಜು ಮಾಡಲಾಗುತ್ತಿದೆ. ಈ ನೀರಿನ ಕೊಳವೆ ಮಾರ್ಗವನ್ನು ಅಳವಡಿಸಲು ತಗುಲಿದ ವೆಚ್ಚವನ್ನು ಗ್ರಾಹಕರಿಂದಲೇ ಭರಿಸಲಾಗಿರುತ್ತದೆ. |
| ಇ | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗಾಗಿ ಈ ಭಾಗಕ್ಕೆ ಕುಡಿಯುವ ನೀರು ಒದಗಿಸಲು ಸರ್ಕಾರವು ಕ್ರಮ ಕೈಗೊಳ್ಳುವುದು? (ಪೂರ್ಣ ಮಾಹಿತಿ ನೀಡುವುದು) | ದೇವನಹಳ್ಳಿ ಪಟ್ಟಣವು ಬೆಂಗಳೂರು ಜಲಮಂಡಳಿಯ ವ್ಯಾಪ್ತಿಗೆ ಒಳಪಡುವುದಿಲ್ಲದ ಕಾರಣ ಸದರಿ ಪ್ರದೇಶಕ್ಕೆ ನೀರು ಸರಬರಾಜು ಮಾಡಲು ಸಾಧ್ಯವಿರುವುದಿಲ್ಲ. |

**ಸಂಖ್ಯೆ: ನಅಇ 38 ಎಂಎನ್ಐ 2021**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1335
2. ಸದಸ್ಯರ ಹೆಸರು : ಶ್ರೀ ಎಂ.ಶ್ರೀನಿವಾಸ್
3. ಉತ್ತರಿಸಬೇಕಾದ ದಿನಾಂಕ : 09-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಮಂಡ್ಯ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಜಲಸಂಪನ್ಮೂಲ ಇಲಾಖೆಯ ಕಾವೇರಿ ನೀರಾವರಿ ನಿಗಮದ ವತಿಯಿಂದ 2ನೇ ಹಂತದ ಕಾಮಗಾರಿಗಳಿಗೆ ಟೆಂಡರ್ ಕರೆದು ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ ಸರ್ಕಾರ ಈ ಬಗ್ಗೆ ತೆಗೆದುಕೊಂಡಿರುವ ಕ್ರಮಗಳೇನು ; | ಕೃಷ್ಣರಾಜಸಾಗರ ಆಧುನೀಕರಣ ಯೋಜನೆಯಡಿಯಲ್ಲಿ, ವಿಶ್ವೇಶ್ವರಯ್ಯ ನಾಲಾ ಜಾಲದ ಉಳಿದ 1490 ಕಿ.ಮೀ. ಉದ್ದಕ್ಕೆ ಎರಡನೇ ಹಂತದಲ್ಲಿ ಅಭಿವೃದ್ಧಿಪಡಿಸಲು ರೂ.1662.00 ಕೋಟಿ ಮೊತ್ತದ ಕಾಮಗಾರಿಗಳನ್ನು 14 ಪ್ಯಾಕೇಜ್‌ಗಳಾಗಿ ವಿಂಗಡಿಸಿ ಕೈಗೆತ್ತಿಕೊಳ್ಳಲು ಯೋಜಿಸಲಾಗಿದೆ. ಈ ಪೈಕಿ, ಮಂಡ್ಯ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪ್ಯಾಕೇಜ್ 4, 5ಎ, 6, 7 & 8 ಕಾಮಗಾರಿಗಳು ಬರುತ್ತಿದ್ದು, ಇದರಲ್ಲಿ 290.48 ಕಿ.ಮೀ. ಉದ್ದದ ನಾಲಾ ಜಾಲವನ್ನು ರೂ.259.00 ಕೋಟಿ ಮೊತ್ತದಲ್ಲಿ ಅಭಿವೃದ್ಧಿಪಡಿಸಲು ಉದ್ದೇಶಿಸಿ, ಕಾಮಗಾರಿಗಳ ಅಂದಾಜುಗಳನ್ನು ತಯಾರಿಸಲಾಗಿದೆ.<br><br>ದಿನಾಂಕ:20-09-2019 ರ ಕಾವೇರಿ ನೀರಾವರಿ ನಿಗಮದ ಮಂಡಳಿಯ 70ನೇ ಸಭೆಯ ನಿರ್ಣಯದಂತೆ ಇನ್ನೂ ಅನುಷ್ಠಾನಗೊಳ್ಳದ ಸದರಿ ಕಾಮಗಾರಿಗಳನ್ನು ಆಡಳಿತಾತ್ಮಕ ಹಾಗೂ ಆರ್ಥಿಕ ಶಿಸ್ತನ್ನು ಕಾಯ್ದುಕೊಳ್ಳುವ ಹಿತದೃಷ್ಟಿಯಿಂದ ಕೈಬಿಡಲಾಗಿರುತ್ತದೆ.<br><br>ಪ್ರಸಕ್ತ ಆರ್ಥಿಕ ವರ್ಷದಲ್ಲಿ ನಿಗಮದ ಕಾರ್ಯಭಾರ ಅಧಿಕವಾಗಿರುವುದರಿಂದ ಸದರಿ ಅನುಷ್ಠಾನಗೊಳ್ಳದೇ ಇರುವ ಕಾಮಗಾರಿಗಳನ್ನು ಮುಂಬರುವ ಆರ್ಥಿಕ ವರ್ಷದಲ್ಲಿ ಅನುದಾನದ ಲಭ್ಯತೆಗನುಸಾರವಾಗಿ ಕೈಗೊಳ್ಳುವ ಕುರಿತು ಪರಿಶೀಲಿಸಲಾಗುವುದು. |
| ಆ | ತಡೆಹಿಡಿದಿರುವ ಕಾಮಗಾರಿಗಳನ್ನು ಮುಂದುವರೆಸಲು ಯಾವಾಗ ಆದೇಶ ನೀಡಲಾಗುವುದು ? | |

*ಸಂಖ್ಯೆ:ಜಸಂಇ 38 ಎನ್‌ಎಲ್‌ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

7

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1277 |
| ಸದಸ್ಯರ ಹೆಸರು | : | ಶ್ರೀ ಹೂಲಗೇರಿ ಡಿ.ಎಸ್. (ಲಿಂಗಸುಗೂರು) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಆಮದಿಹಾಳ ಗ್ರಾಮದ ಹತ್ತಿರ 110/11ಕೆವಿ ವಿದ್ಯುತ್ ಉಪ ಕೇಂದ್ರಗಳ ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ಅಮದಿಹಾಳ ಗ್ರಾಮದ ಹತ್ತಿರ ಹೊಸದಾಗಿ 110/11 ಕೆ.ವಿ. ವಿದ್ಯುತ್ ಉಪ ಕೇಂದ್ರವನ್ನು ಸ್ಥಾಪಿಸುವ ಪ್ರಸ್ತಾವನೆಯು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ತಾಂತ್ರಿಕ ಸಮನ್ವಯ ಸಮಿತಿ ಸಭೆಯಲ್ಲಿ ಅನುಮೋದನೆಗೊಂಡಿದ್ದು, ಅಗತ್ಯವಿರುವ ಜಮೀನನ್ನು ಗುರುತಿಸುವ ಪ್ರಕ್ರಿಯೆಯು ಜಾರಿಯಲ್ಲಿರುತ್ತದೆ. |
| ಆ) | ಈ ತಾಲ್ಲೂಕಿನಲ್ಲಿ HVDS ಯೋಜನೆ ಜಾರಿಗೊಳಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಈ ಯೋಜನೆಯ ಪ್ರಯೋಜನಗಳೇನು; | ಲಿಂಗಸುಗೂರು ತಾಲ್ಲೂಕಿನಲ್ಲಿ ಹೆಚ್.ವಿ.ಡಿ.ಎಸ್. ಯೋಜನೆಯು ಜಾರಿಯಲ್ಲಿರುವುದಿಲ್ಲ. |
| ಇ) | ರಾಯಚೂರು ಜಿಲ್ಲೆಯಲ್ಲಿ ಬರುವ ಮಸ್ಕಿ ವಿದ್ಯುತ್ ಉಪ ಕೇಂದ್ರದಿಂದ ಮುದಗಲ್ ಪಟ್ಟಣಕ್ಕೆ 110/11 ಕೆ.ವಿ ನೂತನ ವಿದ್ಯುತ್ ಮಾರ್ಗದ ಕಾಮಗಾರಿ ಯಾವ ಹಂತದಲ್ಲಿ ಇದೆ; | ರಾಯಚೂರು ಜಿಲ್ಲೆಯಲ್ಲಿ ಬರುವ ಮಸ್ಕಿ ವಿದ್ಯುತ್ ಉಪಕೇಂದ್ರದಿಂದ ಮುದಗಲ್ ಪಟ್ಟಣಕ್ಕೆ 110/11 ಕೆ.ವಿ. ನೂತನ ವಿದ್ಯುತ್ ಮಾರ್ಗದ ಕಾಮಗಾರಿಯು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ತಾಂತ್ರಿಕ ಸಮನ್ವಯ ಸಮಿತಿ ಸಭೆಯಲ್ಲಿ ಅನುಮೋದನೆಗೊಂಡಿದ್ದು, ಪ್ರಸ್ತುತ ವಿದ್ಯುತ್ ಮಾರ್ಗದ ಸರ್ವೆ ಕಾಮಗಾರಿಗೆ ಟೆಂಡರ್ ಕರೆಯುವ ಹಂತದಲ್ಲಿರುತ್ತದೆ. |
| ಈ) | ಈ ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನಲ್ಲಿ ಬರುವ ಗುರಗುಂಟಾ, ಗೌಡರು, ಪೈದೊಡ್ಡಿ ಗ್ರಾಮ ಪಂಚಾಯತಿಗಳಿಗೆ ನಿರಂತರ ವಿದ್ಯುತ್ ಜ್ಯೋತಿ ಸರಬರಾಜು ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ಗುರಗುಂಟಾ, ಗೌಡರು, ಪೈದೊಡ್ಡಿ ಗ್ರಾಮ ಪಂಚಾಯಿತಿಗಳಿಗೆ ನಿರಂತರ ವಿದ್ಯುತ್ ಸರಬರಾಜು ಮಾಡಲು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ವತಿಯಿಂದ ಅಂದಾಜು ಪಟ್ಟಿಯನ್ನು ದಿನಾಂಕ:17.12.2020 ರಂದು ತಯಾರಿಸಲಾಗಿದ್ದು, ಕಾಮಗಾರಿಗಳನ್ನು ಕೈಗೊಳ್ಳಬೇಕಾಗಿರುತ್ತದೆ. |

**ಸಂಖ್ಯೆ: ಎನರ್ಜಿ 49 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

0

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1242 |
| ಸದಸ್ಯರ ಹೆಸರು | : | ಶ್ರೀ ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯ ಮಂತ್ರಿಯವರು |

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅಕ್ರಮ-ಸಕ್ರಮ ಯೋಜನೆಯಡಿ ವಿದ್ಯುತ್ ಸಂಪರ್ಕವನ್ನು ಪಡೆದಿರುವ ರೈತರು /ಫಲಾನುಭವಿಗಳ ಸಂಖ್ಯೆ ಎಷ್ಟು; (ಸಂಪೂರ್ಣ ವಿವರ ನೀಡುವುದು) | ಪ್ರಸ್ತುತ, ರಾಜ್ಯದಲ್ಲಿ ಅನಧಿಕೃತ ಅಥವಾ ಹೊಸ ಪಂಪ್‌ಸೆಟ್ ಎಂಬ ಭೇದವಿಲ್ಲದೇ ನೋಂದಾಯಿಸುವ ಎಲ್ಲಾ ಪಂಪ್‌ಸೆಟ್ ಅರ್ಜಿಗಳಿಗೆ ಸರ್ಕಾರದ ಸುತ್ತೋಲೆ ಸಂಖ್ಯೆ ಇಎನ್ 41 ವಿಎಸ್‌ಸಿ 2014/ಪಿ1 ದಿನಾಂಕ: 14-07-2014 & 23-07-2014 ಗಳನ್ವಯ ವಿದ್ಯುತ್ ಸಂಪರ್ಕ ಕಲ್ಪಿಸಲು ವಿದ್ಯುತ್ ಸರಬರಾಜು ಕಂಪನಿಗಳು ಕ್ರಮ ವಹಿಸುತ್ತಿವೆ.<br><br>ಈ ಹಿಂದೆ ಚಾಲ್ತಿಯಲ್ಲಿದ್ದ ಅಕ್ರಮ-ಸಕ್ರಮ ಯೋಜನೆಯಡಿ 2.65 ಲಕ್ಷ ಹಾಗೂ ಸುತ್ತೋಲೆ ಸಂಖ್ಯೆ ಇಎನ್ 41 ವಿಎಸ್‌ಸಿ 2014/ಪಿ1 ಗಳನ್ವಯ ಮೂಲಸೌಕರ್ಯ ರಚನಾ ಶುಲ್ಕವನ್ನು ಪಾವತಿಸಿರುವ ಅರ್ಜಿಗಳ ಪೈಕಿ, 3.54 ಲಕ್ಷ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿದೆ. |
| ಆ) | ಈ ಯೋಜನೆಯಡಿ ವಿದ್ಯುತ್ ಸಂಪರ್ಕ ಪಡೆಯಲು ರೈತರುಗಳು/ ಅರ್ಹ ಫಲಾನುಭವಿಗಳು ಸರ್ಕಾರಕ್ಕೆ/ ವಿದ್ಯುತ್ ನಿಗಮಗಳಿಗೆ ಠೇವಣಿ ಮಾಡಬೇಕಾದ ಮೊತ್ತವೆಷ್ಟು; (ವಿವರ ನೀಡುವುದು) | ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವ ಸಂಬಂಧ ಸರ್ಕಾರದ ಸುತ್ತೋಲೆ ಇಎನ್ 41 ವಿಎಸ್‌ಸಿ 2014/ಪಿ1 ದಿನಾಂಕ: 14-07-2014 & 23-07-2014 ಗಳನ್ವಯ ಈ ಕೆಳಕಂಡ ಠೇವಣಿಗಳನ್ನು ಪಾವತಿಸಬೇಕಾಗಿದೆ.<br>• ಅರ್ಜಿ ಶುಲ್ಕ – ರೂ 50/-<br>• ಮೂಲಸೌಕರ್ಯ ರಚನಾ ಶುಲ್ಕ – ರೂ 10,000/-<br>• ಇತರೆ ಭದ್ರತಾ ಠೇವಣಿಗಳು |
| ಇ) | ಈ ಯೋಜನೆಯಡಿ ವಿದ್ಯುತ್ ಸಂಪರ್ಕ ಪಡೆಯುವ ರೈತರುಗಳಿಗೆ ಫಲಾನುಭವಿಗಳಿಗೆ ಪ್ರತಿನಿತ್ಯ ಎಷ್ಟು ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸೌಲಭ್ಯವನ್ನು ನೀಡಲಾಗುತ್ತಿದೆ; (ವಿವರ ನೀಡುವುದು) | ರಾಜ್ಯದಲ್ಲಿ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ತಾಂತ್ರಿಕವಾಗಿ ಸಾಧ್ಯವಿರುವೆಡೆ ದಿನವಹಿ 7 ಗಂಟೆಗಳ 3 ಫೇಸ್ ವಿದ್ಯುತ್ತನ್ನು ಹಗಲು ವೇಳೆಯಲ್ಲಿಯೇ ಪೂರೈಸಲಾಗುತ್ತಿದ್ದು, ಬಾಕಿ ಉಳಿದ ಪ್ರದೇಶಗಳಲ್ಲಿ 7 ಗಂಟೆಗಳ 3 ಫೇಸ್ ವಿದ್ಯುತ್ತನ್ನು ಬ್ಯಾಚ್‌ಗಳಲ್ಲಿ ಪೂರೈಸಲಾಗುತ್ತಿದೆ. |
| ಈ) | ಚಿಂತಾಮಣಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಈ ಯೋಜನೆಯಡಿ ವಿದ್ಯುತ್ ಸಂಪರ್ಕ ಪಡೆದಿರುವ ರೈತರುಗಳ ಪಂಪ್ ಸೆಟ್‌ಗಳಿಗೆ ನಿಗದಿತ ಪ್ರಮಾಣದಲ್ಲಿ 3 ಫೇಸ್ ವಿದ್ಯುತ್ ಪೂರೈಕೆಯಾಗದಿರುವುದರಿಂದ ರೈತರುಗಳ ಬೆಳೆದ ಬೆಳೆಗಳಿಗೆ ಸಮರ್ಪಕವಾಗಿ ನೀರನ್ನು ಹಾಯಿಸಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಚಿಂತಾಮಣಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಎಲ್ಲಾ ರೈತರ ಪಂಪ್‌ಸೆಟ್‌ಗಳು ಒಳಗೊಂಡಿರುವ ಕೃಷಿ ಫೀಡರುಗಳಿಗೆ ಯಾವುದೇ ತೊಂದರೆಯಾಗದಂತೆ ಪ್ರತಿ ದಿನ 2 ಬ್ಯಾಚ್‌ಗಳಲ್ಲಿ 7 ಗಂಟೆಗಳ 3 ಫೇಸ್ ವಿದ್ಯುತ್ತನ್ನು ಪೂರೈಕೆ ಮಾಡಲಾಗುತ್ತಿದೆ. |

ಸಂಖ್ಯೆ: ಎನರ್ಜಿ 43 ಪಿಪಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1253 |
| ಸದಸ್ಯರ ಹೆಸರು | : | ಶ್ರೀ ರವೀಂದ್ರ ಶ್ರೀಕಂಠಯ್ಯ (ಶ್ರೀರಂಗಪಟ್ಟಣ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಾರ್ವಜನಿಕರು ಎಲ್ಲಾ ಸೇವೆಗಳ ಬೆಲೆ ಏರಿಕೆಯಿಂದ ತತ್ತರಿಸಿದ್ದು, ವಿದ್ಯುತ್ ಶುಲ್ಕ ಹೆಚ್ಚಳ ಮಾಡುವ ಪ್ರಸ್ತಾವನೆಯು ವಿದ್ಯುತ್ ಕಂಪನಿಗಳ ಮುಂದಿದೆಯೇ; | • ವಿದ್ಯುಚ್ಛಕ್ತಿ ಕಾಯ್ದೆ 2003 ರಲ್ಲಿನ ನಿಬಂಧನೆಗಳ ಪ್ರಕಾರ ವಿದ್ಯುತ್ ಸರಬರಾಜು ಕಂಪನಿಗಳು ಪ್ರತಿ ವರ್ಷ ದರ ಪರಿಷ್ಕರಣೆ ಪ್ರಸ್ತಾವನೆಯ ಅರ್ಜಿಯನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಮುಂದೆ ಸಲ್ಲಿಸಬೇಕಾಗಿರುತ್ತದೆ. ಅದರಂತೆ, ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳ ವತಿಯಿಂದ ಆರ್ಥಿಕ ವರ್ಷ 2021-22 ನೇ ಸಾಲಿಗೆ ವಿದ್ಯುತ್ ದರ ಹೆಚ್ಚಿಸಲು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ.<br><br>• ವಿದ್ಯುಚ್ಛಕ್ತಿ ದರ ಪರಿಷ್ಕರಣೆ ಆದೇಶವನ್ನು ಹೊರಡಿಸುವುದು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ವ್ಯಾಪ್ತಿಗೊಳಪಟ್ಟಿರುತ್ತದೆ.<br><br>• ವಿದ್ಯುತ್ ಸರಬರಾಜು ಕಂಪನಿಗಳು ರಾಜ್ಯದ ವಿದ್ಯುತ್ ಗ್ರಾಹಕರ ಬೇಡಿಕೆಯನ್ನು ಪೂರೈಸಲು ವಿವಿಧ ವಿದ್ಯುತ್ ಉತ್ಪಾದಕರೊಂದಿಗೆ ಹಾಗೂ ಉಷ್ಣ ವಿದ್ಯುತ್ ಮೂಲಗಳಿಂದ ಮತ್ತು ನವೀಕರಿಸಬಹುದಾದ ಇಂಧನ ಮೂಲಗಳಿಂದ ವಿದ್ಯುತ್ತನ್ನು ಖರೀದಿಸಲು ದೀರ್ಘಾವಧಿ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಂಡಿದ್ದು, ಸದರಿ ಒಪ್ಪಂದದಂತೆ ವಿ.ಸ.ಕಂ.ಗಳು ಪ್ರತಿ ತಿಂಗಳು ಉಷ್ಣ ವಿದ್ಯುತ್ ಸ್ಥಾವರಗಳಿಗೆ ನಿಗದಿತ ವೆಚ್ಚಗಳನ್ನು ಪಾವತಿಸಬೇಕಾಗಿರುತ್ತದೆ. ಸದರಿ ವಿದ್ಯುತ್ ಖರೀದಿಯ ವೆಚ್ಚವು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದ್ದು, ಕಾರ್ಯ ಮತ್ತು ನಿರ್ವಹಣಾ ಮತ್ತು ಬಂಡವಾಳ ವೆಚ್ಚಕ್ಕಾಗಿ ಪಡೆಯುವ ಸಾಲದ ವೆಚ್ಚಗಳು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿರುವುದರಿಂದ ವಿದ್ಯುತ್ ದರದಲ್ಲಿನ ಹೆಚ್ಚಳವು ಅನಿವಾರ್ಯವಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಇದರಿಂದ ಸಾರ್ವಜನಿಕರಿಗೆ ತೀವ್ರತರವಾಗಿ ತೊಂದರೆಯಾಗುತ್ತಿರುವ ಬಗ್ಗೆ ಸರ್ಕಾರ ಚಿಂತಿಸಿದೆಯೇ; | |
| ಇ) | ಬೆಲೆ ಏರಿಕೆಯಿಂದ ತತ್ತರಿಸಿರುವ ಸಾರ್ವಜನಿಕರಿಗೆ ಅನುಕೂಲವಾಗುವಂತೆ ವಿದ್ಯುತ್ ದರಗಳನ್ನು ಇಳಿಸುವ ಕುರಿತು ಸರ್ಕಾರ ಚಿಂತನೆ ನೆಡಸಿದೆಯೇ; | |
| ಈ) | ಹಾಗಿದ್ದಲ್ಲಿ, ಈ ಬಗ್ಗೆ ಕೈಗೊಂಡ ಕ್ರಮಗಳೇನು? | |

| | |
|---|---|
| | • ವಿದ್ಯುತ್ ಸರಬರಾಜು ಕಂಪನಿಗಳು ವಿದ್ಯುತ್ ಖರೀದಿ ವೆಚ್ಚಗಳು, ಸಿಬ್ಬಂದಿಗಳ ವೇತನ ವೆಚ್ಚಗಳು, O & M ವೆಚ್ಚಗಳು ಹಾಗೂ ಇತರೆ ವೆಚ್ಚಗಳು ಮತ್ತು ಬಂಡವಾಳ ವೆಚ್ಚ ಮತ್ತು ಕಾರ್ಯನಿರತ ಬಂಡವಾಳಕ್ಕಾಗಿ ಪಡೆದ ಸಾಲಗಳ ಮೇಲಿನ ಬಡ್ಡಿ ಪಾವತಿ ವೆಚ್ಚಗಳನ್ನು ಭರಿಸಲೇಬೇಕಾಗಿರುವುದರಿಂದ, ಸದರಿ ವೆಚ್ಚಗಳನ್ನು ಹಣಕಾಸು ಸಂಸ್ಥೆಗಳು / ಬ್ಯಾಂಕುಗಳಿಂದ ಸಾಲ ಪಡೆದು ನಿರ್ವಹಿಸಲಾಗುತ್ತಿರುತ್ತದೆ. ಸಾಲದ ಮೇಲಿನ ಬಡ್ಡಿ / ಇತರೆ ವೆಚ್ಚಗಳನ್ನು ಪಾವತಿಸಬೇಕಾಗಿರುವುದರಿಂದ, ವಿ.ಸ.ಕಂ.ಗಳ ಆರ್ಥಿಕತೆಯ ಮೇಲೆ ಹೆಚ್ಚಿನ ಪರಿಣಾಮ ಬೀರುತ್ತಿದೆ.<br><br>ಈ ಮೇಲಿನ ಪ್ರಮುಖ ಕಾರಣಗಳಿಂದಾಗಿ ಹಾಗೂ ವಿದ್ಯುಚ್ಛಕ್ತಿ ಕಾಯ್ದೆ 2003 ರಲ್ಲಿನ ನಿಬಂಧನೆಗಳ ಪ್ರಕಾರ ವಿದ್ಯುತ್ ಸರಬರಾಜು ಕಂಪನಿಗಳು ಪ್ರತಿ ವರ್ಷ ದರ ಪರಿಷ್ಕರಣೆ ಪ್ರಸ್ತಾವನೆಯ ಅರ್ಜಿಯನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗ (ಕವಿನಿ ಆಯೋಗ)ದ ಮುಂದೆ ಸಲ್ಲಿಸುತ್ತಿದ್ದು, ವಿದ್ಯುತ್ ಸರಬರಾಜು ಕಂಪನಿಗಳು ಸಲ್ಲಿಸುವ ದರ ಪರಿಷ್ಕರಣೆಯ ಅರ್ಜಿಯನ್ನು, ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ವಿದ್ಯುತ್ ಸರಬರಾಜು ಕಂಪನಿಗಳ ವಾರ್ಷಿಕ ಕಾರ್ಯ ನಿರ್ವಹಣೆ ಪುನರ್ಮನನ (Annual Performance Review), ವಾರ್ಷಿಕ ಕಂದಾಯ ಬೇಡಿಕೆ (Annual Revenue Requirement) ಮತ್ತು ಲಾಭ / ನಷ್ಟದ ಅಂಕಿ ಅಂಶಗಳು ಹಾಗೂ ಇತರೆ ಅಂಕಿ ಅಂಶಗಳನ್ನು, ಗ್ರಾಹಕರ ಮತ್ತು ಸ್ಟೇಕ್ ಹೋಲ್ಡರ್ಸ್‌ಗಳ ಅಭಿಪ್ರಾಯ ಮತ್ತು ಆಕ್ಷೇಪಣೆಗಳನ್ನು ಪರಿಗಣಿಸಿ, ಪ್ರತಿ ವರ್ಷ ದರ ಪರಿಷ್ಕರಣೆ ಕುರಿತು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಅಗತ್ಯ ಕ್ರಮ ಜರುಗಿಸುತ್ತದೆ. |

**ಸಂಖ್ಯೆ: ಎನರ್ಜಿ 45 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ